ಸಾಹಿತ್ಯ ಮತ್ತು ಜೀವನ-ಭಾಗ ೩.

# ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ

(ಹತ್ತು ಪ್ರಬಂಧಗಳು)

ಆನಂದ್ ಬ್ರದರ್ಸ್,
ಬೆಂಗಳೂರು.
೧೯೫೦

# ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ

(ಸಾಹಿತ್ಯ ಮತ್ತು ಜೀವನ–ಭಾಗ ೨)

# ಪರಿವಿಡಿ

# ಮುನ್ನುಡಿ

'**ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ**' ಎಂಬ ಹೆಸರು ಈ ಗ್ರಂಥಕ್ಕೆ ಒಪ್ಪುತ್ತದೆಯೇ ಎಂದು ಕೆಲವು ಓದುಗರು ಕೇಳಬಹುದು. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಸರ್ವಾಂಗೀಣ ಉತ್ಕರ್ಷವನ್ನು ಚಿತ್ರಿಸುವುದು ಈ ಗ್ರಂಥದ ಉದ್ದೇಶವಲ್ಲ; ಅದರ ಕೆಲವು ಅಂಶಗಳನ್ನು ಮಾತ್ರ ಗಮನಿಸಲಾಗಿದೆ. ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಎಂದರೆ ಇದಿಷ್ಟೇ ಎಂದು ಭಾವಿಸುವುದರ ಬದಲು ಇವೂ ಅದರ ಶಾಖೋಪ ಶಾಖೆಗಳು ಎಂದು ಓದುಗರು ತಿಳಿಯಬೇಕು

ಪ್ರಾಚೀನ, ಅರ್ವಾಚೀನ ಕನ್ನಡ ಸಾಹಿತ್ಯವನ್ನು ವಿಮರ್ಶಿಸುವೆಡೆ ನಾನು ತಳೆದಿರುವ ಧೋರಣೆಯ ಬಗ್ಗೆ ಓದುಗರ ಗಮನ ಸೆಳೆಯ ಬಿಚ್ಛಿಸುತ್ತೇನೆ. ಪರಂಪರೆಯಲ್ಲಿ ಗೌರವಾದರ ಇರಬೇಕಾದುದಗತ್ಯ. ಆದರೆ ಆ ಗೌರವಾದರದ ಎಲ್ಲೆಯೇನು? ವಿಚಾರವನ್ನು ಪರಂಪರೆ ಕುಂಠಿಸುವುದಾದರೆ ಅದಕ್ಕೆ ಮಾನ್ಯತೆ ಕೊಡಬೇಕೇ ಬೇಡವೇ ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ.

ಪರಂಪರೆಯನ್ನು ನಾನು ಅಲ್ಲಗಳೆಯುತ್ತಿಲ್ಲ. ಯಾವದು ಅರ್ವಾ ಚೀನ—ನವೀನ ಎಂದು ನಾವು ಭಾವಿಸುವೆವೋ ಅದು ಪರಂಪರೆಯ ಹಾಸುಹೊಕ್ಕಿನಲ್ಲಿ ಬೆಳೆದು ಬಂದಿದೆ. ಕಾಲ, ದೇಶ, ಪರಿಸ್ಥಿತಿಗನು ಸಾರವಾಗಿ ಕೆಲವು ವಿಶಿಷ್ಟಗುಣಗಳನ್ನು ದೊರಕಿಸಿಕೊಂಡಿದೆ. ಇಂದಿನ ಅರ್ವಾಚೀನ, ನಾಳಿನ ಪ್ರಾಚೀನ. ಇಂದಿನ ಪ್ರಗತಿ, ನಾಳೆಗೆ ಪರಂಪರೆ. ಇಂದಿರುವುದು ಹಿಂದೆ ಬೀಳಲೇ ಬೇಕು—ಅದೇ ಪ್ರಗತಿಯ ಲಕ್ಷಣ. ಜೀವನ ಒಂದು ಸ್ಥಾನದಲ್ಲಿ ಒಂದು ಸಂಪ್ರದಾಯದಲ್ಲಿ ನೆಲಸಿ ಕೊಳಚೆ ನೀರಿನಂತೆ ನಾರಬಾರದು.

ಈ ಗ್ರಂಥದಲ್ಲಿರುವ ಕೆಲವು ಪ್ರಬಂಧಗಳಲ್ಲಿ ನಾನು ಇನ್ನೊಂದು ವಿಚಾರವನ್ನು ಮುಂಡಿಸಲೆತ್ನಿಸಿದ್ದೇನೆ. ಕನ್ನಡದಲ್ಲಿ ನವೋದಯ ಆರಂಭ ವಾದ ಕಾಲದಲ್ಲಿ ಅದಕ್ಕೆ ಹೆಚ್ಚಿನ ಪೋಷಣೆ ಅಗತ್ಯವಾಗಿತ್ತು. ಕನ್ನ ಡದ ಬರಹಗಳನ್ನೆಲ್ಲಾ ಸ್ವಲ್ಪ ಹೆಚ್ಚಾಗಿಯೇ ಪ್ರಶಂಸಿಸುವ ಪರಿಪಾಠ

ಆರಂಭವಾಯಿತು. ಹೊಸಗನ್ನಡ ಸಾಹಿತ್ಯ ಈಗ ಮೂರು ದಶಕಕಾಲ ಬೆಳೆದಿದೆ. ಅದು ಶೈಶವಾವಸ್ಥೆಯನ್ನು ಕಳೆದು ತಾರುಣ್ಯಕ್ಕೆ ಕಾಲಿಟ್ಟದೆ. ಈಗ ಸಾಹಿತ್ಯವನ್ನು ನಿರಭಿಮಾನದಿಂದ ಕೂಡಿದ ನಿಷ್ಪಕ್ಷಪಾತ ದೃಷ್ಟಿಯಿಂದ ನೋಡುವುದು ಅವಶ್ಯಕವಾಗಿ ಆಗಬೇಕಾದ ಕೆಲಸ. ನಮ್ಮದೆನ್ನುವ ಅಭಿಮಾನವಿರಬೇಕು. ಆದರೆ ಒಣ ಅಭಿಮಾನದಿಂದ ಸಾಹಿತ್ಯ ವೃಕ್ಷ ಬೆಳೆಯುವುದಿಲ್ಲ. ತುಲನಾತ್ಮಕ ದೃಷ್ಟಿಯಿಂದ ವಿವೇಚಿಸಿ ನಮ್ಮ ಸಾಹಿತ್ಯ ಜಗತ್ತಿನ ಸಾಹಿತ್ಯದಲ್ಲಿ ಯಾವ ಮಟ್ಟಕ್ಕೆ ನಿಲ್ಲಬಹುದೆಂದು ವಿಚಾರಮಾಡಬೇಕು. ಅದರಲ್ಲಿ 'ಅವಿನಾಶಿತ್ವ' ಎಷ್ಟರ ಮಟ್ಟಗಿದೆಯೆನ್ನುವುದನ್ನು ಕಂಡುಹಿಡಿಯಬೇಕು.

ಇದರಲ್ಲಿ ಪ್ರಕಟವಾಗಿರುವ ಕೆಲವು ಪ್ರಬಂಧಗಳು ಮದರಾಸು, ಮೈಸೂರು ಆಕಾಶವಾಣಿ ಭಾಷಣಗಳಿಗಾಗಿ ಬರೆದವು. ಇನ್ನು ಕೆಲವು ಪತ್ರಿಕೆಗಳ ವಿಶೇಷ ಸಂಚಿಕೆಗಳಿಗಾಗಿ ಬರೆದವು. 'ಸಜೀವ ಸಾಹಿತ್ಯ' ಹುಬ್ಬಳ್ಳಿಯ ಜಿಲ್ಲಾ ಸಾಹಿತ್ಯ ಸಮ್ಮೇಳನದಲ್ಲಿ ನಾನು ಮಾಡಿದ ಅಧ್ಯಕ್ಷ ಭಾಷಣ; 'ಸಂಸ್ಕೃತಿಯೆಂದರೇನು' ದಾವಣಗೇರಿಯ ಸಾಂಸ್ಕೃತಿಕ ಸಮ್ಮೇಳನದಲ್ಲಿ ನಾನು ಮಾಡಿದ ಅಧ್ಯಕ್ಷ ಭಾಷಣ.

ವಿಚಾರ ಸಾಹಿತ್ಯವನ್ನು ಪ್ರಕಟಿಸುವುದಕ್ಕೆ ಪ್ರಕಾಶಕರು ಹಿಂದೆ ಮುಂದೆ ನೋಡುವಾಗ, ಸಂತೋಷದಿಂದ ಈ ಸಂಗ್ರಹವನ್ನು ಪ್ರಕಟಿಸಿದ ಮೆಸರ್ಸ್ ಆನಂದ್ ಬ್ರದರ್ಸ್ ಅವರಿಗೆ ನನ್ನ ಕೃತಜ್ಞತೆ ಸಲ್ಲಬೇಕಾಗಿದೆ.

"ಅನ್ನಪೂರ್ಣ"
ವಿಶ್ವೇಶ್ವರಪುರ, ಬೆಂಗಳೂರು
೬—೩—೧೯೫೦

ಅ. ನ. ಕೃಷ್ಣರಾಯ.

# ಸಿಂಹಾವಲೋಕನ

ಸುಮಾರು ಎರಡುಕೋಟಿ ಜನ ಮಾತನಾಡುವ ಕನ್ನಡ ಭಾಷೆಗೆ ಇಪ್ಪತ್ತು ಶತಮಾನಗಳ ಪರಂಪರಾಗತ ಸಂಸ್ಕೃತಿಯ ಬೆಂಬಲವಿದೆ. (ಈಗ ಸಿಕ್ಕಿರುವ ಕನ್ನಡದ ಮೊದಲನೇ ಗ್ರಂಥ 'ವೊಡ್ಡಾರಾಧನೆ') ಹದಿನೇಳು ಶತಮಾನಗಳ ಹಿಂದಿನದು. ಕನ್ನಡ ಜನ ಅನೇಕ ಸಾಮ್ರಾಜ್ಯಗಳನ್ನು ಕಟ್ಟಿದರು. ಶಿಲ್ಪ, ಚಿತ್ರಕಲೆಗಳ ನೂತನ ಸಂಪ್ರದಾಯಗಳನ್ನು ಸ್ಥಾಪಿಸಿದರು. ಪ್ರಕೃತಿ ತಾಯಿಯಂತೂ ಕನ್ನಡ ಜನಗಳ ಮೇಲೆ ಅನ್ಯಾದೃಶ ಪ್ರೇಮ ತೋರಿದ್ದಾಳೆ. ನದಿಗಳಿಂದ, ಅರಣ್ಯಗಳಿಂದ, ಬೆಟ್ಟಸಾಲುಗಳಿಂದ ತುಂಬಿ ಮನೋಹರವಾಗಿರುವ ದೇಶ ಕರ್ನಾಟಕ. ನಿಸರ್ಗ ಸಂಪತ್ತು, ಜನರನ್ನು ಸಂಸ್ಕೃತರನ್ನಾಗಿಯೂ, ಸಹನಾಶೀಲರನ್ನಾಗಿಯೂ ಮಾಡಿದೆ. ತ್ರಿಮತಸ್ಥಾಪನಾಚಾರ್ಯರಲ್ಲಿ ಒಬ್ಬರು ಕನ್ನಡಿಗರು; ಉಳಿದಿಬ್ಬರು ಕನ್ನಡನಾಡನ್ನೇ ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡರು. ವೇದಾಂತ, ಬೌದ್ಧಧರ್ಮ ಜೈನಧರ್ಮ, ಇಸ್ಲಾಂ ಮತ್ತು ಕ್ರೈಸ್ತಧರ್ಮಗಳು ಈ ನಾಡಿನಲ್ಲಿ ಬಾಳಿ ಬದುಕಿದುವು.

ಕನ್ನಡ ಸಾಹಿತ್ಯವನ್ನು ಉತ್ತುಂಗ ಶಿಖರಕ್ಕೊಯ್ದ ಕೀರ್ತಿ ಜೈನರದು ಪಂಪ, ರನ್ನ, ಜನ್ನ, ರತ್ನಾಕರವರ್ಣಿ, ನಾಗಚಂದ್ರಾದಿ ಮಹಾಕವಿಗಳು

ನ್ನಡ ಕಾವ್ಯಭಂಡಾರಕ್ಕೆ ಕನ್ನಡ ಧರ್ಮಭಂಡಾರಕ್ಕೆ ಅನರ್ಘ್ಯರತ್ನ ಳನ್ನೊಪ್ಪಿಸಿದರು. ಹನ್ನೆರಡನೆಯ ಶತಮಾನದಲ್ಲಿ ವೀರಶೈವರು ಸಾಹಿತ್ಯ ಲ್ಲಿ ಕ್ರಾಂತಿಮಾಡಿ, ಅದನ್ನು ಜನಪದದ ಬಳಿಗೊಯ್ದರು. ಬ್ರಾಹ್ಮಣ ಲ್ಲಿ ನಾರಣಪ್ಪ, ಲಕ್ಷ್ಮೀಶ, ನರಹರಿ, ರುದ್ರಭಟ್ಟ, ಮುದ್ದಣಾದಿ ಮಹಾ ವಿಗಳು ಹುಟ್ಟಿದರು. ಕನ್ನಡಕ್ಕೆ ಸೇವೆ ಸಮರ್ಪಿಸಿದ ಮುಸ್ಲಿಮರಲ್ಲಿ ಶುನಾಳ ಶರೀಫ ಸಾಹೇಬ ಗಣನೀಯನಾಗಿದ್ದಾನೆ. ಮುಸ್ಲಿಮನಾಗಿ ನಿಸಿದ್ದರೂ ಶಿಶುನಾಳ ಶರೀಫ ಸಾಹೇಬ ಹಿಂದೂ ದೇವರುಗಳ ಮೇಲೆ ಾಡುಗಳನ್ನು ಬರೆದು ಸತ್ಯದ ಅಮರತ್ವವನ್ನು ಸಾರಿದ್ದಾನೆ. ಆತನ ಾಡುಗಳು ಭಾವನಾವೇಶದಿಂದಲೂ, ವಿಚಾರ ಪ್ರೌಢಿಮೆಯಿಂದಲೂ ೂಡಿವೆ. ಶರೀಫ ಸಾಹೇಬನನ್ನು ಕನ್ನಡದ ಕಬೀರ ಎಂದು ನಾವು ಾರಾಳವಾಗಿ ಕರೆಯಬಹುದು. ರೆವರೆಂಡ್ ಕಿಟ್ಟೆಲ್‌ರವರ ನೇತೃತ್ವದಲ್ಲಿ ಾಸೆಲ್ ಮಿಶನ್ನಿನ ಕೆಲವು ಪಾದ್ರಿಗಳು ಕನ್ನಡದ ಸೇವೆ ಮಾಡಿದರು. ನಮಗೆ ಉಪಲಬ್ಧವಾಗಿರುವ ಶಬ್ದಕೋಶ, ವ್ಯಾಕರಣ, ಛಂದಸ್ಸು, ಅಲಂಕಾರ ಗ್ರಂಥಗಳು ಅವರ ಸಾಧನ, ಸಾಹಸ, ನಿಷ್ಕಾಮಪ್ರೇಮದ ಫಲ.

ಪರಂಪರೆಯು ಈ ಪ್ರೌಢಿಮೆ ಕೆಲಮಟ್ಟಿಗೆ ಜನರ ಕ್ರಿಯಾಶಕ್ತಿ ಯನ್ನು ಕುಂಠಿಸಿತು. ಪರಂಪರೆ ದೋಷರಹಿತವಾಗಿಯೂ ಇರಲಿಲ್ಲ. ಮೊರೆಗ್ಗಳಿಗೆ ಪ್ರಾಚೀನ ಸಾಹಿತ್ಯದಲ್ಲಿ ದೊರೆತ ಅನವಶ್ಯಕ ಪ್ರಾಧಾನ್ಯ ಹಾಗೂ (ಮತಕ್ಕೆ ಕವಿಗಳು ಕೊಟ್ಟ ಹಿರಿಯ ಸ್ಥಾನದಿಂದ) ಜನರ ದೃಷ್ಟಿ ಸ್ವಲ್ಪ ಸಂಕುಚಿತವಾಯಿತು. ಹೇತುಕವಾದವನ್ನು ಮತ ಮತ್ತು ಸಾಮ್ರಾಜ್ಯವಾದ ತಡೆಗಟ್ಟಿ ಅದರ ಪ್ರಗತಿಗೆ ಅಡ್ಡಿಯಾದವು. ಹನ್ನೆರಡನೆಯ ಶತಮಾನದಲ್ಲಿ ಬಸವೇಶ್ವರ ಒಂದು ಮಹಾ ಪ್ರಯತ್ನ ನಡೆಸಿದ. ಆದರೆ ಅವನ ಕಾಲದಲ್ಲಿಯೇ ತಲೆದೋರಿದ ಪ್ರಚಂಡ ಪ್ರಳಯದಿಂದಲೂ ಅವನ ಅನುಯಾಯಿಗಳ ಧರ್ಮಾಂಧತೆಯಿಂದಲೂ ವಿಚಾರವಾದಕ್ಕೆ ಸೋಲುಂಟಾಯಿತು.

ಹತ್ತೊಂಭತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಮಿಲ್, ಬರ್ಕ್, ರೂಸೋ, ಮೊದಲಾದ ಐರೋಪ್ಯ ವಿಚಾರವಾದಿಗಳ ವಿಚಾರ

ಲಹರಿ ಕರ್ನಾಟಕವನ್ನು ಪ್ರವೇಶಿಸಿತು. ಪಾಶ್ಚಾತ್ಯ ವಿಚಾರವಾದ ಮತ್ತು ಸಂಸ್ಕೃತಿಗಳಿಗೆ ಮಾರುಹೋಗಿದ್ದ ಕೆಲವು ವಿದ್ವಾಂಸರು ಸಾಹಿತ್ಯವನ್ನು ಜನಪದದ ಬಳಿಗೆ ತೆಗೆದುಕೊಂಡು ಹೋಗಲು ಪ್ರಯತ್ನಿಸಿದರು. ಅವರಲ್ಲಿ ಮುಖ್ಯರಾದ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರು ಇಂಗ್ಲೀಷ್ ಕಾವ್ಯ ಸಾಹಿತ್ಯದ ಕೆಲವು ಆಣಿಮುತ್ತುಗಳನ್ನು ಆರಿಸಿ ತಮ್ಮ ಇಂಗ್ಲಿಷ್ ಗೀತೆಗಳ ಗ್ರಂಥವನ್ನು ಪ್ರಕಟಿಸಿದರು. ಕನ್ನಡ ಛಂದಸ್ಸುಗಳಿಗೆ ಇಂಗ್ಲಿಷ್ ಗೀತೆಗಳನ್ನು ಅಳವಡಿಸಿ ಅವರು ಅಪೂರ್ವ ಕಲಾಪಾಕವನ್ನು ಸಿದ್ಧಗೊಳಿಸಿದರು. ಅವರ ಆಳವಾದ ಪಾಂಡಿತ್ಯ, ವಾಗ್ವೈಖರಿ, ಅನ್ಯಾದೃಶ ಶ್ರದ್ಧೆಯಿಂದ ಕನ್ನಡ ನಾಡಿನಲ್ಲಿ 'ನವೋದಯ' ಪ್ರಾರಂಭವಾಯಿತು. ಅವರು ಅನೇಕ ಕಿರಿಯ ಲೇಖಕರನ್ನು ಬೆಳಕಿಗೆ ತಂದು ಅವರಿಗೆ ನೂತನಮಾರ್ಗ ಆವಿಷ್ಕಾರ ಮಾಡಿಕೊಟ್ಟರು. ಹಳೆಯ ಕಾವ್ಯಮಾರ್ಗಕ್ಕೆ ಬದಲು ಚೇತೋಹಾರಿಯೂ, ಲಲಿತವೂ ಆದ ಹೊಸ ಕಾವ್ಯಮಾರ್ಗ ಪ್ರಸಾರಕ್ಕೆ ಬಂದಿತು. ಶ್ರೀಯವರ ಶಿಷ್ಯವರ್ಗಕ್ಕೆ ಸೇರಿದ್ದ ವಿ. ಸೀತಾರಾಮಯ್ಯ, ಕೆ. ವಿ. ಪುಟ್ಟಪ್ಪ, ಪು. ತಿ. ನರಸಿಂಹಾಚಾರ್ಯ ಮತ್ತು ಜಿ. ಪಿ. ರಾಜರತ್ನಂ ಅಳಿಯುತ್ತಲಿದ್ದ ಹಳೆ ಜಗತ್ತಿಗೂ ಉದಯೋನ್ಮುಖವಾಗಿದ್ದ ಹೊಸ ಜಗತ್ತಿಗೂ ಸೇತುವೆ ಕಟ್ಟಲೆತ್ನಿಸಿದರು. ಈ ಕಾಲದ ಕವಿಗಳಲ್ಲಿ ಕೆ. ವಿ ಪುಟ್ಟಪ್ಪನವರು ಶ್ರೇಷ್ಠರೆನ್ನುವುದು ನಿರ್ವಿವಾದ. ಅವರದು ಬಹು ಮುಖ ಪ್ರತಿಭೆ. ಅವರು ವರ್ಡ್ಸ್‌ವರ್ತನ ಸಂಪ್ರದಾಯದ ಗೀತಾಕಾರರು? ಪುಟ್ಟಪ್ಪನವರು ಪ್ರಕೃತಿಪ್ರಿಯರು. ತಮ್ಮ ದಿವ್ಯ ಪ್ರತಿಭೆಯಿಂದ ಆಕೆಯ ವಿವಿಧ ವಿಲಾಸ, ರಾಗ, ಸೌಂದರ್ಯವನ್ನು ಪುಟ್ಟಪ್ಪನವರು ಚಿತ್ರಿಸಿದ್ದಾರೆ. ಜಡ ಪ್ರಕೃತಿ ಕೂಡ ಅವರ ಶಬ್ದವಿಲಾಸಕ್ಕೆ ಕುಣಿದಾಡುತ್ತದೆ. ಅನುಭಾವ ಮತ್ತು ಕ್ರಾಂತಿ ಎರಡೂ ಪುಟ್ಟಪ್ಪನವರ ಕಾವ್ಯದ ಹೆಗ್ಗುರುತುಗಳಾಗಿವೆ. ಪ್ರಕೃತಿಯ ಹಲವು ತೆರನ ವೈಭವಕ್ಕೆ ಕವಿ ಮನಸೋಲುವಂತೆ ಆಕೆಯ ಹಲವು ಕುಂದು ಕೊರತೆಗಳನ್ನೂ ಕವಿ ಗಮನಿಸುತ್ತಾನೆ. ಜನತೆಯ ಹಲವು ದೌರ್ಬಲ್ಯಗಳನ್ನೆದುರಿಸಿ, ಅವರ ಧಾರ್ಮಿಕ ಅಂಧಶ್ರದ್ಧೆ, ಸಂಕುಚಿತ ಮನೋಭಾವನೆಗಳನ್ನು ಖಂಡಿಸುವದರಲ್ಲಿ ಪುಟ್ಟಪ್ಪನವರು ಹಿಂದೆಮುಂದೆ ನೋಡುವುದಿಲ್ಲ. ಸೌಂದರ್ಯಾರಾಧಕನಾದ

ಕವಿ ಸತ್ಯಪ್ರಿಯನೂ ಹೌದೆನ್ನುವುದನ್ನು ಪುಟ್ಟಪ್ಪನವರು ತಮ್ಮ ಕಾವ್ಯದಲ್ಲಿ ತೋರಿದ್ದಾರೆ. ಕನ್ನಡ ಕಾವ್ಯವನದಲ್ಲಿ ಪುಟ್ಟಪ್ಪನವರ ವಾಣಿ ವಿನೂತನ ನಾದಸೌರಭದಿಂದ ಕೂಡಿದೆ. ಸೀತಾರಾಮಯ್ಯನವರ ಕಾವ್ಯ ನಿರ್ಮಲಗಂಗೆಯಂತೆ ಓತಪ್ರೋತವಾಗಿ ಹರಿಯುತ್ತದೆ. ಅವರ ಗೀತೆಗಳು ಸಾಣೆಗೊಂಡ ರತ್ನಗಳಂತಿವೆ. ಪರಿಶುದ್ಧ ಭಾವನೆ, ಸ್ಪಷ್ಟ ವಿಚಾರಗಳು ಅವುಗಳಲ್ಲಿ ಒಡೆದು ಮೂಡಿವೆ. ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ನಮ್ಮನ್ನು ಕಾಡುತ್ತಿರುವ ಹಲವು ಕುಂದುಕೊರತೆಗಳನ್ನು ಕಂಡು ಕವಿಯು ಮನಸ್ಸು ನೊಂದಿದೆ. ಪುಟ್ಟಪ್ಪನವರ ಕಾವ್ಯದಲ್ಲಿ ಆಶಾವಾದ ಕಂಡುಬರುವಂತೆ ಸೀತಾರಾಮಯ್ಯನವರ ಕಾವ್ಯದಲ್ಲಿ ನಿರಾಶಾವಾದ ಮೂಡಿದೆ. ನಮ್ಮನ್ನು ದಾಸ್ಯಪಂಕದಲ್ಲಿ ಕೆಡವಿರುವ ಮೂವತ್ತುಮೂರು ಕೋಟಿ ದೇವತೆಗಳು ನಾಶವಾಗಬೇಕು ಎಂದು ಕವಿ ಘೋಷಿಸುತ್ತಾನೆ. ಈ ದೇವತೆಗಳ ಬದಲು 'ಮಾನವತೆ' ಆಳಬೇಕೆಂಬುದು ಕವಿಯ ಸಂದೇಶ. ಮಾನವತೆಯ ಆಧಿಪತ್ಯ ಸಾಧ್ಯವೇ ಎಂಬ ಶಂಕೆ ಕವಿಯ ಮನಸ್ಸಿನಲ್ಲಿ ಮೂಡಿದೆ. ಸೀತಾರಾಮಯ್ಯನವರು ಹಲವು ವೀರಗೀತೆಗಳನ್ನು ಬರೆದಿದ್ದಾರೆ. ಅವರ ರಾಷ್ಟ್ರಗೀತೆಗಳು ಶಕ್ತಿಯುತವಾಗಿಯೂ ಭಾವನಾಪ್ರಧಾನವಾಗಿಯೂ ಇವೆ. ಪು. ತಿ. ನರಸಿಂಹಾಚಾರ್ಯರು ಲಲಿತ ಗೀತಾಕಾರರು. ಅವರ ಗೀತೆಗಳಲ್ಲಿ ಕರುಣಾರಸಕ್ಕೆ ಪ್ರಾಧಾನ್ಯ. ಹರಿದಾಸರ ಸಂಪ್ರದಾಯಕಾವ್ಯಕ್ಕೆ ನೂತನ ರೂಪಗೊಟ್ಟ ನರಸಿಂಹಾಚಾರ್ಯರು ಜನಮನದಲ್ಲಿ ಭಕ್ತಿ, ನಂಬಿಕೆ, ಆಸೆಗಳನ್ನು ತುಂಬಿದ್ದಾರೆ. ರಾಜರತ್ನಂ ಒಂದು ವಿಶಿಷ್ಟ ಕಾವ್ಯ ಮಾರ್ಗವನ್ನನುಸರಿಸಿದರು. ಉಮರ್ ಖಯ್ಯಾಂನಂತೆ ಮದ್ಯದ ಉಪಮಾನ ಬಳಸಿಕೊಂಡು ಸಾಮಾನ್ಯ ಜನರ ಕಷ್ಟಸುಖಗಳನ್ನು ಚಿತ್ರವತ್ತಾಗಿ ಬಣ್ಣಿಸಿದರು. ಕಾವ್ಯಕ್ಕೆ ಜನಪದದ ರೂಢಿ ಭಾಷೆಯನ್ನು ಬಳಸಿಕೊಂಡವರಲ್ಲಿ ಇವರೇ ಮೊದಲಿಗರು.

ಆಧುನಿಕ ಕನ್ನಡ ಕಾವ್ಯದ ಇನ್ನೊಬ್ಬ ಪ್ರತಿಭಾವಂತ ಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆ. ಬೇಂದ್ರೆ ಅರವಿಂದಯೋಗಿಗಳ ಭಕ್ತರು. ಅವರ ಕಾವ್ಯದಲ್ಲಿ ಅರವಿಂದರ ಪೂರ್ಣಯೋಗದ ಪ್ರಭಾವ ಚೆನ್ನಾಗಿ ವ್ಯಾಪಿಸಿದೆ. ಬೇಂದ್ರೆಯವರ ಮೊಟ್ಟಮೊದಲಿನ ಕೃತಿಗಳಲ್ಲಿ

ಕ್ರಾಂತಿದರ್ಶನ ಕಂಡುಬರುತ್ತದೆ. ಕ್ರಾಂತಿಯಿಂದ ಅದೃಶ್ಯವಾದಕ್ಕೆ ಅವರು ತೆರಳಿದರು. ಉತ್ತರ ಕರ್ನಾಟಕದ ಜಾನಪದ ಗೀತೆಗಳ ಛಂದಸ್ಸನ್ನು ಆಧುನಿಕ ಕಾವ್ಯರಚನೆಗೆ ಉಪಯೋಗಿಸಿಕೊಂಡು ಕಾವ್ಯವನ್ನು ಜನಪದದ ವಾಣಿಯನ್ನಾಗಿ ಮಾಡಿದ ಕೀರ್ತಿ ಬೇಂದ್ರೆಯವರದು. ಅವರ ಅನುಭಾವವಾದ ಕೆಲವು ಸಲ ಅವರ ಕಾವ್ಯವನ್ನು ಅಸ್ಪಷ್ಟ ಮಾಡುತ್ತದೆ; ಭಾವಮೈತ್ರಿಯನ್ನು ಸಡಲಿಸುತ್ತದೆ. ಅವರ ಶೈಲಿ ಗಡಸು. ಆದರೆ ಪೂರ್ಣಜೀವನವನ್ನು ಅವರು ಚಿತ್ರಿಸುವ ಬಗೆ ಮತ್ತು ವೈಯಕ್ತಿಕ ಪಾರಿಶುದ್ಧತೆಗೆ ಕೊಟ್ಟಿರುವ ಪ್ರಧಾನ್ಯ ಪ್ಲೇಟೋ ಮಹಾಶಯನ ವಿಚಾರಲಹರಿಯನ್ನು ನೆನಪಿಗೆ ತರುತ್ತದೆ. ಅರವಿಂದರ ಸಂದೇಶದಂತೆ ರೂಪಗೊಂಡ ಸಾಮ್ರಾಜ್ಯದ ಬರುವನ್ನು ಬೇಂದ್ರೆಯವರ ಕಾವ್ಯ ನಿರೀಕ್ಷಿಸುತ್ತದೆ.

ಕಾವ್ಯದ ಸರಿದೊರೆಯಾಗಿ ಕರ್ನಾಟಕದಲ್ಲಿ ಬೆಳೆದ ಇನ್ನೊಂದು ಸಾಹಿತ್ಯ ಪ್ರಕಾರವೆಂದರೆ ಸಣ್ಣಕತೆ. ಮಾಸ್ತಿ ವೆಂಕಟೇಶಅಯ್ಯಂಗಾರ್ಯರು ತಮ್ಮ ಮಧ್ಯಮವರ್ಗದ ಸುಖಜೀವಿಗಳ ಚಿತ್ರಗಳೊಂದಿಗೆ ಈ ಸಂಪ್ರದಾಯವನ್ನು ಆರಂಭಿಸಿದರು. ಸುಲಭ ಶೈಲಿ, ನವುರಾದ ಹಾಸ್ಯ, ವಿಶಾಲ ಅಂತಃಕರಣಗಳಿಂದ ಕೂಡಿದ ಅವರ ಕಥೆಗಳು ಜನಪ್ರಿಯವಾಗಿವೆ. ಮಾಸ್ತಿಯವರು ಹುಟ್ಟು ಕಥೆಗಾರರು. ಅವರ ಕಥೆಗಳಲ್ಲಿ ತೊಡಕಿಲ್ಲದ ತಂತ್ರನೈಪುಣ್ಯವಿದೆ. ಮಾಸ್ತಿಯವರು ಮಿತವಾದಿಗಳು. ಅವರ ಕತೆಗಳು ಮಿತವಾದ, ಸಂಯಮಗಳಿಂದ ಕೂಡಿವೆ. ಮಾಸ್ತಿಯವರ ಕಥೆಗಳನ್ನು ಅನೇಕ ತರುಣ ಬರಹಗಾರರು ಅನುಸರಿಸಲಾರಂಭಿಸಿದರು. ಈ ಶ್ರೇಷ್ಠ ಕಲಾವಿದನಂತೆ ತಾವೂ ತಮ್ಮ ಕಲೆಯನ್ನು ವೈಯಕ್ತಿಕವಾಗಿ ಅಳವಡಿಸಿಕೊಳ್ಳದೆ ಅನುಕರಣಕ್ಕೆ ಮನಸೋತದ್ದರಿಂದ ಅವರ ಕಥೆಗಳು ಮೇಲು ಮಟ್ಟ ಮುಟ್ಟಲಿಲ್ಲ. ಎ. ಸೀತಾರಾಂ ಮಾತ್ರ ಮಾಸ್ತಿಯವರ ಸಂಪ್ರದಾಯಕ್ಕೆ ಸೇರಿದ್ದರೂ ಅವರ ತಂತ್ರವನ್ನನುಸರಿಸಿ ಸ್ವತಂತ್ರ ಮಾರ್ಗವನ್ನು ಹುಡುಕಿಕೊಂಡರು. ಅವರ ವಸ್ತು, ನಿರ್ವಹಣೆಯಲ್ಲಿ ಸ್ವಾತಂತ್ರ್ಯವಿದೆ. ಸೀತಾರಾಂ ಅವರ ಕಥೆಗಳಲ್ಲಿ 'ಬಹುಮುಖತೆ', ಜೀವನದ ಆಳವಾದ ಪೃಥಕ್ಕರಣ ಕಂಡುಬರ

ದಿದ್ದರೂ ಅವು ರಸಸಿದ್ಧಿಯನ್ನು ಪಡೆದಿವೆ. ಈ ಗ್ರಂಥಕರ್ತರು ಸ್ವತಂತ್ರ ಮಾರ್ಗವನ್ನು ಅಳವಡಿಸಿಕೊಂಡರು. ಒಬ್ಬ ವಿಮರ್ಶಕರು ಹೇಳಿರುವಂತೆ 'ಇವರ ಕತೆಗಳಲ್ಲಿ ಆಳವಾದ ಮನೋಭಾವ, ವಿವೇಚನೆ ಮತ್ತು ಅನ್ಯಾದೃಶ ಮಾನವ ಪ್ರೇಮ' ತುಂಬಿದೆ.

೧೯೩೦ ರ ವರೆಗೆ ಕಾದಂಬರಿಕಲೆ ಕರ್ನಾಟಕದಲ್ಲಿ ವರ್ಧಿಸಲಿಲ್ಲ. ೧೮೯೫ ರಲ್ಲಿ ಎಂ. ಎಸ್. ಪುಟ್ಟಣ್ಣನವರು ತಮ್ಮ 'ಮಾಡಿದ್ದುಣ್ಣೋ ಮಾರಾಯ' — 'ಮುಸುಕು ತೆಗೆಯೆ ಮಾಯಾಂಗನೆ' ಕಾದಂಬರಿ ಗಳನ್ನು ಪ್ರಕಟಿಸಿದ್ದರು. ೧೯೨೦ ರಲ್ಲಿ ಕೆರೂರು ವಾಸುದೇವಾಚಾ ರ್ಯರು 'ಇಂದಿರಾ', 'ಔರಂಗಜೇಬ' ಮೊದಲಾದ ಕಾದಂಬರಿ ಗಳನ್ನು ಪ್ರಕಟಿಸಿದ್ದರು. ಕನ್ನಡ ಲೇಖಕರು ೧೯೩೦ ರ ವರೆಗೆ ಕಾದಂ ಬರಿಯ ಕಡೆಗೆ ಹೆಚ್ಚು ಲಕ್ಷ್ಯಕೊಡಲಿಲ್ಲ. ದೊಡ್ಡ ಕಾದಂಬರಿಗಳನ್ನು ಪ್ರಕಟಿಸಲು ಪ್ರಕಾಶಕರು ಮುಂದೆ ಬರದಿದ್ದುದ್ದೂ ಒಂದು ಕಾರಣವಾಗಿ ರಬಹುದು. ಈ ಗ್ರಂಥಕರ್ತರು ಮತ್ತು ಶಿವರಾಮ ಕಾರಂತರೂ ಕಾದಂಬರಿಕಲೆ ಬೆಳೆಯುವುದಕ್ಕೆ ಕಂಕಣಬದ್ಧರಾದರು. ಕೆ. ವಿ. ಪುಟ್ಟಪ್ಪ, ಮಿರ್ಜಿ ಅಣ್ಣಾರಾಯ, ವಿ. ಎಂ. ಇನಾಂದಾರ, ತ. ರಾ. ಸುಬ್ಬರಾಯ, ವಿ. ಕೃ. ಗೋಕಾಕ ಮೊದಲಾದ ಲೇಖಕರು ಕಾದಂಬರಿ ಗಳನ್ನು ಬರೆಯತೊಡಗಿದರು. ಇಂದು ಕಾದಂಬರಿ ಕನ್ನಡ ಸಾಹಿತ್ಯದಲ್ಲಿ ತುಂಬ ಪ್ರಭಾವಶಾಲಿಯಾಗಿದೆ. ಇತರ ಸಾಹಿತ್ಯಪ್ರಕಾರಗಳು ಅದರ ಪ್ರಾಬಲ್ಯದಿಂದ ಸಾಕಷ್ಟು ಬೆಳೆಯುತ್ತಿಲ್ಲ.

ನಾಟಕ ಸಾಹಿತ್ಯ ಬೆಳಸಿದ ಕೀರ್ತಿ ಪ್ರತಿಭಾಶಾಲಿ ಟಿ. ಪಿ. ಕೈಲಾಸಂ ಅವರಿಗೆ ಸೇರತಕ್ಕದ್ದು. ಅವರು ತಮ್ಮ 'ಟೊಳ್ಳುಗಟ್ಟಿ' ನಾಟಕದಿಂದ ನಾಟಕಸಾಹಿತ್ಯ ರಚನೆಯನ್ನಾರಂಭಿಸಿ ಎರಡು ದಶಕಕಾಲ ಕನ್ನಡನಾಟಕ ಸಾಮ್ರಾಜ್ಯವನ್ನು ಅನಭಿಷಿಕ್ತ ಪ್ರಭುಗಳಂತೆ ಆಳಿದರು. ಸಾಮಾಜಿಕ ಸಮಸ್ಯೆಗಳನ್ನು ನಾಟಕಗಳ ಮೂಲಕ ಬಿಚ್ಚಿಟ್ಟಿದ್ದಲ್ಲದೆ ಹಳೆಯ ಪುರಾಣ ಕಥೆಗಳಿಗೆ ನೂತನಾರ್ಥ ಕಲ್ಪಿಸಿ ಅನೇಕ ನಾಟಕ ಗಳನ್ನು ಬರೆದರು. ಅವರು ೬೦ ನಾಟಕಗಳನ್ನು ಕನ್ನಡಿಗರಿಗಿತ್ತಿದ್ದಾರೆ.

ಕೈಲಾಸಂ, ಕಾರಂತ, ಜಾಗಿರದಾರ್, ಈ ಗ್ರಂಥಕರ್ತ ಈ ನಾಲ್ವರೂ ನಾಟಕ ಸಾಹಿತ್ಯ ಬೆಳೆಯಲು ಕಾರಣರಾಗಿದ್ದಾರೆ.

ಕನ್ನಡದಲ್ಲಿ ಸಂಶೋಧನೆ, ಕಾವ್ಯವಿಮರ್ಶೆ ಕೆಲವು ವಿದ್ವಾಂಸರ ಭವ್ಯ ಸೇವೆಯಿಂದ ಬಹಳ ಮೇಲುಮಟ್ಟಕ್ಕೆ ಹೋಯಿತು. ಗೋವಿಂದ ಪೈ, ಕೆ. ಜಿ. ಕುಂದಣಗಾರ, ಎಂ. ಆರ್. ಶ್ರೀನಿವಾಸಮೂರ್ತಿ, ತೀ. ನಂ. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್ಯ, ಬಸವನಾಳ, ಶ್ರೀಕಂಠ ಶಾಸ್ತ್ರಿ, ಡಿ. ವಿ. ಗುಂಡಪ್ಪ, ಸಿ. ಕೆ. ವೆಂಕಟರಾಮಯ್ಯ ಮೊದಲಾದವರು ಸೊಗಸಾದ ಸೇವೆ ಸಲ್ಲಿಸಿದ್ದಾರೆ. ಈ ಮಹನೀಯರ ಶ್ರದ್ಧೆಯಿಂದ ಅನೇಕ ಕನ್ನಡ ಕಾವ್ಯಗಳ ಪರಿಷ್ಕರಣವಾಗಿ ಅವು ಸುಂದರವಾಗಿ ಪ್ರಕಟವಾದವು.

ಇತರ ದೇಶಗಳ ಸಾಹಿತ್ಯವನ್ನು ಬರಮಾಡಿಕೊಂಡು ಅವುಗಳ ಸೌಂದರ್ಯವನ್ನು ಆರಾಧಿಸುವ ಕೆಲಸವನ್ನೂ ಕನ್ನಡನಾಡು ತೃಪ್ತಿಕರವಾಗಿ ಮಾಡಿದೆ. ಗ್ರೀಕ್ ನಾಟಕಕಾರರಾದ ಸೊಫೋಕ್ಲಿಸ್ ಮತ್ತು ಯೂರಿಪೀಡಿಸರ ಎರಡು ನಾಟಕಗಳನ್ನು ಬಿ. ಎಂ. ಶ್ರೀಕಂಠಯ್ಯನವರು ಕನ್ನಡಕ್ಕೆ ತಂದರು. ಶ್ರೀಯುತರ ಶಿಷ್ಯರಾದ ಕೆ. ವಿ. ರಾಘವಾಚಾರ್ಯರೂ, ಎಲ್. ಗುಂಡಪ್ಪನವರೂ ಗ್ರೀಕ್, ತಮಿಳು, ಸಾಹಿತ್ಯಗಳಿಂದ ಕೆಲವು ಉತ್ತಮ ಭಾಗಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಗುರುನಾಥ ಜೋಶಿಯವರು ಹಿಂದಿಯಿಂದಲೂ, ವಿ. ಎಂ. ಇನಾಮದಾರ್ ಮತ್ತು ಜೋಗಳೇಕರ ಪಾಂಡುರಂಗರಾಯರು ಮರಾಟಿಯಿಂದಲೂ, ಜಯಲಕ್ಷ್ಮಿ ಶ್ರೀನಿವಾಸನ್‌ರವರು ತಮಿಳಿನಿಂದಲೂ ಕೆಲವು ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಫ್ರಾನ್ಸಿನ ನಾಟಕಕಾರ ಮೋಲಿಯರನ 'ತಾರ್ತುಫ್' ನಾಟಕದ ಅನುವಾದ ಮಾಡಿರುವ ಎ. ಎನ್. ಮೂರ್ತಿರಾಯರು ಅನುವಾದಕಾರರಿಗೆ ಹೆದ್ದಾರಿ ಹಾಕಿ ಕೊಟ್ಟಿದ್ದಾರೆ. ಠಾಕೂರ್, ಶರತ್‌ಚಂದ್ರ, ಅರವಿಂದ, ಪ್ರೇಮಚಂದ ಇವರ ಹಲವು ಕೃತಿಗಳು ಕನ್ನಡಕ್ಕೆ ಅನುವಾದಗೊಂಡಿವೆ. ಪಿ. ವೆಂಕೋಬಾಚಾರ್ಯರೂ, ತ. ರಾ. ಸುಬ್ಬರಾಯರೂ ಕನ್ನಡಿಗರಿಗೆ ತೆಲುಗು ಸಾಹಿತ್ಯದ ಪರಿಚಯ ಮಾಡಿಕೊಟ್ಟಿದ್ದಾರೆ. ಎ. ನಾರಾಯಣಸ್ವಾಮಿ ಅಯ್ಯರ್ ಅವರು ಬಂಗಾಳಿಯಿಂದ ಅನೇಕ ಕೃತಿಗಳನ್ನು ಕನ್ನಡಕ್ಕೆ ತಂದಿ

ದ್ದಾರೆ. ಗಾಂಧಿಜೀಯವರ ಕೃತಿಗಳನ್ನು ಸಿದ್ದವನಹಳ್ಳಿ ಕೃಷ್ಣಶರ್ಮ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ತ. ರಾ. ಸುಬ್ಬರಾಯ, ರಂ. ರಾ. ದಿವಾಕರರು ಕನ್ನಡಿಸಿದ್ದಾರೆ. ಮಾಸ್‌ಫೀಲ್ಡ್ ಮತ್ತು ಹೌಸಮನ್ನರ ನಾಟಕಗಳನ್ನು ದೇವುಡು ಅವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಎಸ್. ಜಿ. ಶಾಸ್ತ್ರಿಗಳು ಇಬ್ಸನ್ನನ ಕೆಲವು ನಾಟಕಗಳನ್ನು ಕನ್ನಡಕ್ಕೆ ತಂದಿದ್ದಾರೆ.

ಕರ್ನಾಟಕದಲ್ಲಿ ಸಮಾಜ ಶಾಸ್ತ್ರಾಭ್ಯಾಸ, ಧರ್ಮಗಳ ತುಲನಾತ್ಮಕ ವಿವೇಚನೆಯನ್ನಾರಂಭಿಸಿದವರು ಪಂಡಿತ ತಾರಾನಾಥರು. ತಾರಾನಾಥರು ಸಿದ್ಧವಿದ್ವಾಂಸರಾಗಿದ್ದುದಲ್ಲದೆ ವಕ್ತೃಗಳೂ, ಅನೇಕ ಭಾಷಾ ಪ್ರವೀಣರೂ, ಗಾಯಕರೂ ಆಗಿದ್ದರು. ಅವರ ಅಮರಕೃತಿ 'ಧರ್ಮ ಸಂಭವ' ಹೊಸಯುಗದ ಪಲ್ಲವಿ ಹಾಡಿತು. ಅವರ ಅಕಾಲ ಮರಣದಿಂದ ಕರ್ನಾಟಕಕ್ಕೆ ತುಂಬ ನಷ್ಟವಾಯಿತು. ಆಯುರ್ವೇದ, ಲೈಂಗಿಕ ವಿಜ್ಞಾನ ರಂಗದಲ್ಲಿ ಪಂಡಿತರು ಆರಂಭಿಸಿದ ಸೇವೆಯನ್ನು ಡಾ. ದ. ಕೃ. ಭಾರದ್ವಾಜರು ಮುಂದುವರಿಸುತ್ತಿದ್ದಾರೆ. ಅವರ ಶಬ್ದಕೋಶಗಳು, ದಾಂಪತ್ಯ ವಿಜ್ಞಾನ, ಸಂತಾನ ವಿಜ್ಞಾನ, ಆಹಾರ ವಿಜ್ಞಾನಾದಿ ಶಾಸ್ತ್ರೀಯ ಗ್ರಂಥಗಳು ಕನ್ನಡದ ಕೀರ್ತಿಯನ್ನು ಹೆಚ್ಚಿಸಿ. ಡಾ. ದೊಡ್ಡೇರಿ ವೆಂಕಟಗಿರಿರಾಯರು ಲೈಂಗಿಕ ವಿಜ್ಞಾನದ ಮೇಲೆ ಕೆಲವು ಶಾಸ್ತ್ರೀಯ ಗ್ರಂಥಗಳನ್ನು ಲಲಿತ ಶೈಲಿಯಲ್ಲಿ ಬರೆದಿದ್ದಾರೆ.

ಸಮಕಾಲೀನ ಸಾಹಿತ್ಯದ ಮೇಲೆ ಮುಸುಕಿದ್ದ ಅಂಧಕಾರವನ್ನು ನೀಗಿಸಿ, ಹೊಸ ಬರಹಗಾರರನೇಕರನ್ನು ಬೆಳಕಿಗೆ ತಂದ ಕೀರ್ತಿ ಬೆಂಗಳೂರಿನ ಪ್ರಗತಿಶೀಲ ಲೇಖಕರ ಸಂಘದ್ದು. ಅವರು ಪ್ರಕಟಿಸಿರುವ ಗಾರ್ಕಿ, ಠಸಖುಷಿ ಗ್ರಂಥಗಳು ಕನ್ನಡಿಗರ ಕ್ರಿಯಾಶಕ್ತಿಯ ದ್ಯೋತಕಗಳಾಗಿವೆ. ಸಾಹಿತ್ಯ ಜನತೆಯ ವಾಣಿಯಾಗಬೇಕೆಂದು ಪ್ರಗತಿಶೀಲರು ವಾದಿಸಿದರು. ಅವರು ನಾಡಿನ ದೃಷ್ಟಿಯನ್ನು ಬದಲಾಯಿಸಿ ಆಗಸ್ಟು ತಿಂಗಳಿನ ಮಹಾ ಕ್ರಾಂತಿಯಾದನಂತರ ದೇಶದ ಸಾಹಿತ್ಯಪ್ರಗತಿಗೆ ನೆರವಾದರು. ರಾಷ್ಟ್ರದ ಸಮಸ್ಯೆಗಳ ಕಡೆ ಸಾಹಿತಿಗಳ ಲಕ್ಷ್ಯವನ್ನು ಅವರು ಸೆಳೆದರು. ನಿಷ್ಪ್ರಯೋಜಕ ಹೂಬಳ್ಳಿಗಳ ಮೇಲೆ ಕಾವ್ಯ ಬರೆಯುತ್ತಿದ್ದ ಕವಿಗಳನ್ನೆಚ್ಚರಿಸಿ ರಾಷ್ಟ್ರಸೇವೆಗೆ

ಅವರನ್ನು ಅನುಗೊಳಿಸಿದರು. ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು, ಧಾರವಾಡದ ವಿದ್ಯಾವರ್ಧಕ ಸಂಘ ಮತ್ತು ಪ್ರಗತಿಶೀಲ ಲೇಖಕರ ಸಂಘ ಇವು ಮೂರು ಕನ್ನಡಿಗರ ಪ್ರಾತಿನಿಧಿಕ ಸಂಸ್ಥೆಗಳಾಗಿವೆ. ಪರಿಷತ್ತು ಪ್ರತಿ ವರ್ಷ ಕನ್ನಡನಾಡಿನ ಬೇರೆ ಬೇರೆ ಸ್ಥಳಗಳಲ್ಲಿ ಸಮ್ಮೇಳನ ನೆರೆಯಿಸುತ್ತದೆ. ಅದು ಒಂದು ವಿದ್ವತ್ಪೂರ್ಣ ತ್ರೈಮಾಸಿಕವನ್ನು ನಡೆಸುತ್ತಿದೆ. ಕನ್ನಡ ಮಹಾಕಾವ್ಯಗಳ ಪೂರ್ಣ ಹಾಗೂ ಸಂಕ್ಷಿಪ್ತ ಆವೃತ್ತಿಗಳನ್ನೂ ಪ್ರಕಟಿಸು ತ್ತಿದೆ. ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಪ್ರಕಟವಾಗುತ್ತಿರುವ 'ಪ್ರಬುದ್ಧ ಕರ್ನಾಟಕ' ಪತ್ರಿಕೆಯೂ ಅಕ್ಷರ ಪ್ರಚಾರ ಸಮಿತಿಯ ಆಶ್ರಯ ದಲ್ಲಿ ಪ್ರಕಟವಾಗುತ್ತಿರುವ 'ಪುಸ್ತಕ ಪ್ರಪಂಚ' ಪತ್ರಿಕೆಯೂ ಉತ್ತಮ ವರ್ಗದ ಪತ್ರಿಕೆಗಳಾಗಿವೆ.

ದೇಶಕ್ಕೆ ದೊರೆತ ಸ್ವಾತಂತ್ರ್ಯ ಕನ್ನಡ ಸಾಹಿತ್ಯದ ಮೇಲೂ ತನ್ನ ಪ್ರಭಾವ ಮುದ್ರೆಯನ್ನೊತ್ತಿದೆ. ಕನ್ನಡಿಗರು ಒಂದಾಗಿ ಪ್ರಜಾಪ್ರಮುಖವಾದ ಏಕಛತ್ರದ ಕೆಳಗೆ ಬಾಳಬೇಕೆಂದು ಹಾತೊರೆಯುತ್ತಿದ್ದಾರೆ. ಕರ್ನಾಟಕ ಏಕೀಕರಣದ ಕಡೆಗೆ ಅವರ ಲಕ್ಷ್ಯ ಹೋಗಿದೆ. ಏಕೀಕೃತವಾದ ಕರ್ನಾಟಕ ಭಾರತದ ಒಂದು ಅಂಗವಾಗಿ, ಗಾಂಧಿಜಿಯವರು ಹಾಕಿಕೊಟ್ಟಿರುವ ಮೇಲ್ಪಂಕ್ತಿಯನ್ನನುಸರಿಸಬೇಕೆಂಬುದೇ ಅವರ ಉತ್ಕಟಾಕಾಂಕ್ಷೆ.

---

# ರಸಾನುಭವ

ರಸಶಬ್ದ ಅನಾದಿಕಾಲದಿಂದ ಭಾರತೀಯ ಕಾವ್ಯಗಳಲ್ಲಿ ಲಕ್ಷಣ ಗ್ರಂಥಗಳಲ್ಲಿ ಪದೇ ಪದೇ ಬಂದಿದೆ. ಭರತಮುನಿ ಕಾವ್ಯಕ್ಕೆ ರಸವೇ ಮುಖ್ಯವೆಂದು ಹೇಳುತ್ತಾನೆ, ಆನಂದವರ್ಧನಾಚಾರ್ಯ ಕಾವ್ಯದಲ್ಲಿ ಧ್ವನಿಯೇ ಆತ್ಮವೆಂದೂ ರಸವೇ ಪ್ರಾಣವೆಂದೂ ಹೇಳುತ್ತಾನೆ; ವಿಶ್ವನಾಥ ರಸಾತ್ಮಕವಾದ ವಾಕ್ಯ ಕಾವ್ಯವಾಗುವುದೆಂದು ಹೇಳುತ್ತಾನೆ; ಜಗನ್ನಾಥ ರಮಣೀಯವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದ ಕಾವ್ಯವೆಂದು ಹೇಳುತ್ತಾನೆ; ರನ್ನ ಕಾವ್ಯಲಕ್ಷಣವನ್ನು ವಿವೇಚಿಸುತ್ತ 'ಕವಿಮಾರ್ಗದೊಳಪೊಕ್ಕುಂ ನವರಸಮಂ ತೆರೆಯೆ ನುಡಿದನೆನಿಸಿದ ಕವಿ ಸತ್ಕವಿಯೆನಿಕುಂ' ಎಂದು ಹೇಳುತ್ತಾನೆ; ರಾಘವಾಂಕ 'ರಸ ಜೀವ, ಭಾವ ಒಡಲು, ಅರ್ಥ ಅವಯವ' ಎಂದು ಹೇಳುತ್ತಾನೆ; ಸಾಳ್ವ 'ರಸಮಿಲ್ಲದ ಕಾವ್ಯಂ ನೀರಸಮದರಿಂ ಕೃತಿಗೆ ರಸಮೆ ಸಾರಂ' ಎಂದು ಹೇಳುತ್ತಾನೆ; ಷಡಕ್ಷರಿ 'ರಸೆಯೊಳ್ ರಸವತ್ಕವಿತೆ' ಯನ್ನು ನುಡಿಯಬೇಕೆಂದು ಹೇಳುತ್ತಾನೆ.

ರಸವನ್ನುಳಿದು ಕಾವ್ಯ ಕಲೆಗಳಿಲ್ಲವೆಂದು ಪ್ರಾಚೀನರ ಮತ. ರಸಕ್ಕೆ ಕಾವ್ಯದ ಉಳಿದ ಎಲ್ಲ ಅಂಗಗಳೂ ಅಧೀನವಾಗಿರಬೇಕೆಂದು ಅವರು ಮೇಲಿಂದ ಮೇಲೆ ಎಚ್ಚರಿಕೆ ಕೊಡುತ್ತ ಬಂದಿದ್ದಾರೆ.

ರಸವೆಂದರೇನು ? ಯಾವ ಅರ್ಥದಲ್ಲಿ ರಸಶಬ್ದವನ್ನು ಪ್ರಾಚೀನ ಲಕ್ಷಣಕಾರರು ಉಪಯೋಗಿಸಿದ್ದಾರೆ ಎಂದು ವಿವೇಚಿಸುವುದಗತ್ಯ.

ಸಾಮಾನ್ಯಾರ್ಥದಲ್ಲಿ ರಸವೆಂದರೆ ಒಂದು ಪದಾರ್ಥದ ಜೀವಾಳ, ಅದರ ರಮಣೀಯತೆಗೆ ಹೇತುಕವಾದ ಗುಣ. 'ಕಬ್ಬಿನಲ್ಲಿ ರಸವಿಲ್ಲ—ಅವನ ಮುಖ ನೀರಸವಾಗಿದೆ' ಎಂದು ರೂಢಿಯಲ್ಲಿ ನಾವು ಹೇಳುತ್ತೇವೆ. ಹೆಚ್ಚು ಕಡಿಮೆ ಈ ಅರ್ಥವನ್ನೇ ಕಾವ್ಯ, ಕಲೆಗಳಿಗನ್ವಯಿಸುವಾಗ ಉಪಯೋಗಿಸಬಹುದು. ಉಪಾಧಿರಹಿತವಾದ ಅನಂತಾನಂದವೇ ರಸವಾಗುತ್ತದೆ. ಒಂದು ವಸ್ತುವಿನ ರಸವನ್ನು ಪ್ರಸ್ತಾಪಿಸುವಾಗ ರಸ ವಸ್ತುವಿನ ಅಧೀನವಾಗುತ್ತದೆ. ವಸ್ತುವಿಲ್ಲದೆ ರಸವಿಲ್ಲ; ಆದರೆ ವಸ್ತು ವಿಗತೀತವಾದ ಗುಣದ ಕೇವಲಸ್ಥಿತಿ ಯಾವದೋ ಅದನ್ನು ರಸವೆನ್ನಬಹುದು.

ಅನುಭವ ಸಾಪೇಕ್ಷಿಕವಾದುದು. ದುಃಖ ಸುಖಗಳನ್ನು ವ್ಯಕ್ತಿಗೆ, ಪ್ರಾಣಿಗೆ ಅನ್ವಯಿಸಿ ನಾವು ಹೇಳುತ್ತೇವೆ. ಆದರೆ ಈ ಅನುಭವದ ಹಿಂದೆ ಒಂದು ವೈಶಾಲ್ಯತೆ ಇದೆ. ದುಃಖ ಸುಖಗಳ ಕೇವಲಗುಣಗಳೂ ಇವೆ. ರಸ ಶಬ್ದವನ್ನು ಅಂಥ ಕೇವಲಗುಣಕ್ಕೇ ಪ್ರಾಜ್ಞರು ಉಪಯೋಗಿಸುವುದು.

ಅನುಭವ ಯಾವಾಗ ಸಾಪೇಕ್ಷಿಕವಾಗುತ್ತದೆಯೋ ಆಗ ಕ್ಷಣಿಕವೂ ಆಗುತ್ತದೆ. ತಂದೆಯನ್ನು ಕಳೆದುಕೊಂಡ ಮಗನ ದುಃಖ ಕ್ಷಣಿಕ. ಆದರೆ ವಿಯೋಗ ದುಃಖ ಕ್ಷಣಿಕವಲ್ಲ. ಕ್ಷಣಿಕವಾದುದಕ್ಕೆ ಅನಂತತೆಯ ಸ್ವರೂಪ ಕೊಡಬಲ್ಲುದೇ ರಸ.

ರಸ ಮನೋಲೋಕಕ್ಕೆ ಸಂಬಂಧಪಟ್ಟದೆ. ಬಹಿರಂಗವಾಗಿ ಅದು ಪ್ರಕಟವಾಗಲು ಕಾವ್ಯ, ಕಲೆಗಳನ್ನು ಅನುಸರಿಸುತ್ತದೆ.

ರಸದ ಕೇವಲ ಗುಣವನ್ನು ಅನುಲಕ್ಷಿಸಿಯೇ ಉಪನಿಷದ್ಕಾರರು ಪರಮಾತ್ಮನನ್ನು 'ರಸೋ ವೈ ಸಃ' ಎಂದು ಕರೆದುದು. ಋಷಿಯ ಕಣ್ಣಲ್ಲಿ ಪರಮಾತ್ಮ ರಸದ ಘಟ್ಟ. ವ್ಯಕ್ತಿಯ ಗುರಿ ರಸದ ಹೊರ ಪ್ರಕಟನೆಯನ್ನು ಮಾತ್ರ ಆರ್ಜಿಸಿ ತೃಪ್ತಿಪಟ್ಟುಕೊಳ್ಳುವುದಲ್ಲ. ರಸದ ಬುನಾದಿಗೆ ಅವನು ಹೋಗಲೆತ್ನಿಸಬೇಕು. ಯಾವ ಶಕ್ತಿ ಹಿಂದೆ ಕುಳಿತು

ಎಲ್ಲ ಭಾವ ಅನುಭಾವಗಳನ್ನು ಪ್ರೇರೇಪಿಸುತ್ತದೋ ಅದನ್ನು ವ್ಯಕ್ತಿ ದೊರಕಿಸಿಕೊಳ್ಳಬೇಕು.

ರಸದ ಬುನಾದಿಯನ್ನು ಕೆದಕುವುದು, ಅತ್ತ ಧಾವಿಸುವುದು ಅಧ್ಯಾತ್ಮ ಜೀವಿಯ ಕೆಲಸ. ಕಲೆ, ಸಾಹಿತ್ಯ ಅಷ್ಟುದೂರ ತನ್ನ ವ್ಯಾಪ್ತಿಯನ್ನು ಬೆಳಸಬೇಕಾಗಿಲ್ಲ. ನಾವು ಇಂದು ವಿಚಾರಮಾಡುತ್ತಿರುವುದು ರಸದ ಕೇವಲ ಜ್ಞಾನವನ್ನಲ್ಲ; ಅದರ ಪ್ರಕಟಿತ ಸ್ವರೂಪವನ್ನು.

ರಸವನ್ನು ಪ್ರಾಚೀನ ಲಕ್ಷಣಶಾಸ್ತ್ರಜ್ಞರು ಶೃಂಗಾರ, ಹಾಸ್ಯ, ಶೋಕ, ಕ್ರೋಧ, ವೀರ, ಭಯ, ಭೀಭತ್ಸ, ಅದ್ಭುತ, ಶಾಂತ ಎಂದು ವಿಂಗಡಿಸುತ್ತಾರೆ.

ಶೃಂಗಾರ :— ಸೊಗಸಾಗಿ ಅಲಂಕಾರಮಾಡಿಕೊಂಡು, ಹಿತವಾದ ಋತುಮಾನದಲ್ಲಿ ಪ್ರಿಯಜನರು ನಡೆಸುವ ಕ್ರೀಡೆ. ಉಪವನ, ಪುಷ್ಪ, ಸುಗಂಧ, ಗೀತ, ಗಾಯನಗಳು ಶೃಂಗಾರಕ್ಕೆ ಪೋಷಕವಾಗುತ್ತವೆ. ತಾರುಣ್ಯ, ಸೌಂದರ್ಯ ಅದರ ಜೀವವಾಹಿನಿಗಳು. ಶೃಂಗಾರದಲ್ಲಿ ಮೂರು ಬಗೆ. ಅಯೋಗ್ಯ, ಸಂಭೋಗ, ವಿಪ್ರಲಂಬ. ಅಯೋಗ್ಯ, ಸಂಭೋಗ ಶೃಂಗಾರಗಳಿಗಿಂತ ವಿಪ್ರಲಂಬ ಶ್ರೇಷ್ಠವಾದುದು.

ಹಾಸ್ಯ :— "ಹಸತೀತಿ ಸ್ಮೃತೋ ಹಾಸ್ಯಃ" ಎಂದು ಕಾವ್ಯ ಪ್ರಕಾಶಕಾರ ಹೇಳುತ್ತಾನೆ. ವಿಪರೀತ ಅಲಂಕಾರ, ವಿಕೃತಾಚಾರ, ವಿಕೃತಾರ್ಥಗಳಿಂದ ಹಾಸ್ಯ ಹುಟ್ಟುತ್ತದೆ. ಸ್ಮಿತ, ಹಸಿತ, ವಿಹಾಸಿತ, ಅವಹಸಿತ, ಅಪಹಸಿತ, ಅತಿಹಸಿತಗಳೆಂದು ಹಾಸ್ಯದಲ್ಲಿ ಆರು ಬಗೆ. ಇವುಗಳಲ್ಲಿ ಸ್ಮಿತವೇ ಉತ್ತಮವಾದುದು.

ಶೋಕ – ಕರುಣ :— ಕರುಣೆಯಿಂದ ಶೋಕ ಹುಟ್ಟುತ್ತದೆ. ಇಷ್ಟ ಜನಗಳ ಮರಣ, ಬಂಧನ, ಶಾಪಗ್ರಸ್ತತೆ, ಮರ್ಯಾದೆ ಹೋಗುವ ಪ್ರಸಂಗಗಳಿಂದ ಶೋಕ ಹುಟ್ಟುತ್ತದೆ.

ಕ್ರೋಧ – ರೌದ್ರ :— ಕ್ರೋಧದಿಂದ ರೌದ್ರ ಹುಟ್ಟುತ್ತದೆ. ದ್ವೇಷ ನಿಷ್ಠುರಚೇಷ್ಟೆ, ಮತ್ಸರ ಕ್ರೋಧಕ್ಕೆ ಕಾರಣವಾಗುತ್ತವೆ.

ವೀರ :— ಸ್ತುತಿ, ರಣಭೇರಿ ನಿನಾದ, ದೀನರ ಆರ್ತಾಲಾಪ ವೀರರಸಕ್ಕೆ ಉದ್ದೀಪನಗಳು.

ಭಯ :— ರಿಪು, ಸರ್ಪಗಳು ಉದ್ದೀಪನಗಳು.

ಭೀಭತ್ಸ:— ಜಿಗುಪ್ಸೆಯಿಂದ ಭೀಭತ್ಸ ರಸ ಹುಟ್ಟುತ್ತದೆ. ದುರ್ಗಂಧ ಇದಕ್ಕೆ ಉದ್ದೀಪನ.

ಅದ್ಭುತ :— ವಿಸ್ಮಯವನ್ನುಂಟುಮಾಡುವುದು. ಅತಿಶಯಾರ್ಥ ಯುಕ್ತವಾದ ವಾಕ್ಯ, ಶಿಲ್ಪ, ಕರ್ಮ, ರೂಪಗಳಿಂದ ಅದ್ಭುತ ರಸ ಹುಟ್ಟುತ್ತದೆ.

ಶಾಂತ :— ಶಮಭಾವ. ಅಹಂಕಾರರಹಿತವಾದುದು.

ಒಂದೊಂದು ರಸಕ್ಕೆ ಒಂದೊಂದು ಅಧಿದೇವತೆ ಇರುವುದೆಂದೂ, ಹಾಗೆ ಒಂದೊಂದು ಬಣ್ಣ ಒಂದೊಂದು ರಸವನ್ನು ನಿರ್ದೇಶಿಸು ವುದೆಂದೂ ಪ್ರಾಚೀನರ ಮತ.

| | | | | |
|---|---|---|---|---|
| ಶೃಂಗಾರ | — | ಶಾಮ | — | ಹರಿ |
| ಹಾಸ್ಯ | — | ಬಿಳಿ | — | ಗಣಪತಿ |
| ರೌದ್ರ | — | ರಕ್ತ | — | ಯಮ |
| ಕರುಣ | — | ಕಾಷಾಯ | — | ಇಂದ್ರ |
| ವೀರ | — | ಬಿಳಿ | — | ಬ್ರಹ್ಮ |
| ಅದ್ಭುತ | — | ಹೇಮ | — | ವಿಧಿನಾಥ |
| ಭೀಭತ್ಸ | — | ಕೃಷ್ಣ | — | ಮಹಾಕಾಳ |
| ಭಯ | — | ಧೂಮ್ರಾಕಾರ | — | ಮೃತ್ಯು |

ಅಭಿನವಗುಪ್ತ ನವರಸ ಸಿದ್ಧಾಂತವನ್ನು ಒಪ್ಪಿಕೊಳ್ಳುವುದಿಲ್ಲ. ಶಾಂತವೊಂದೇ ರಸವೆಂದು ಅವನ ಅಭಿಮತ. ಶಾಂತಿಯಿಂದಲೇ ಉಳಿದ ರಸಗಳು ಜನ್ಮತಾಳುತ್ತವೆ. ಶಾಂತಿಗೂ ಚತುರ್ಥ ಪುರುಷಾರ್ಥವಾದ ಮೋಕ್ಷಕ್ಕೂ ಸಮೀಪ ಸಂಬಂಧವಿರುವುದರಿಂದ ಅದೇ ಎಲ್ಲ ರಸಗಳ ಕೇಂದ್ರವೆಂದು ಅವನ ಅಭಿಮತ. ಭವಭೂತಿ ಈ ಸ್ಥಾನವನ್ನು ಕರುಣಾರಸಕ್ಕೆ ಕೊಡುತ್ತಾನೆ. ಕರುಣೆ ಪ್ರಕೃತಿ, ಉಳಿದ ರಸಗಳು ವಿಕೃತಿ. ಕರುಣೆಯೇ ಶೃಂಗಾರಾದಿ ರಸಗಳಿಗೆ ಜನ್ಮಕೊಡುತ್ತದೆ, ಎಂದು ಅವನ ಅಭಿಪ್ರಾಯ. ಈ ಸ್ಥಾನವನ್ನು ಕೆಲವು ಲಾಕ್ಷಣಿಕರು ಶೃಂಗಾರ ರಸಕ್ಕೆ ಕೊಡುತ್ತಾರೆ. ಸಾಳ್ವ 'ರಸರತ್ನಾಕರ' ದಲ್ಲಿ

" ಸಾರಂ ಸಂಸಾರದೊಳಬ
ಲಾರತ್ನಂ ಸಾರಮಲ್ಲಿ ಯುಗೌವನಮುದದೊಳ್
ಸಾರಂ ಮಧುರಾಕಾರಂ
ಸಾರಂ ಮತ್ತಂತದರ್ಕ್ಕನುಕೂಲರಸಂ ‖ "

ಎಂದು ಹೇಳುತ್ತಾನೆ. 'ಎಲ್ಲಾ ರಸದೊಳಂ ಶೃಂಗಾರರಸಮೆ ಲೋಕಕ್ಕೆ ಸೊಗಯಿಪ್ಪುದಾದ ಕಾರಣ ಮೊದಲೊಳೀ ಶೃಂಗಾರರಸಂ ಪೇಳಪಟ್ಟುದು' ಎಂದು ಸಾಳ್ವ ಶೃಂಗಾರರಸದ ಪ್ರಧಾನ್ಯಕ್ಕೆ ಕಾರಣವನ್ನು ತಿಳಿಸುತ್ತಾನೆ. 'ಶೃಂಗಾರರಸಂ ಮಿಕ್ಕರಸಂಗಳ್ಗಧಿದೈವ' ಎಂದು ಕವಿಕಾಮನ ಅಭಿಪ್ರಾಯ. ಶೃಂಗಾರ ಆದಿರಸವೆಂದೂ ರಸರಾಜನೆಂದೂ ಹೆಸರಾಗುವುದಕ್ಕೆ ಕಾರಣವೂ ಸಾಕಷ್ಟು ಪ್ರಬಲವಾಗಿದೆ. ಜಗತ್ತಿನ ಎಲ್ಲ ವ್ಯಾಪಾರವೂ ಪುರುಷ, ಪ್ರಕೃತಿಯರ ಲೀಲೆ. ಜೀವನಿಗೆ ಲಿಂಗಭೇದವಿಲ್ಲ. ಆದರೆ ಜೀವ ಭೌತವಸ್ತುವಿನಲ್ಲಿ ವ್ಯಕ್ತವಾದಾಗ ಎಲ್ಲ ವ್ಯಾಪಾರಗಳನ್ನೂ ಅನುಭವಿಸಬೇಕು. ದೇವಾದಿದೇವತೆಗಳಿಗೂ ಈ ಅನುಭವ ತಪ್ಪಿದ್ದಲ್ಲ. ಸುಖ ದುಃಖ, ಕಾರುಣ್ಯ ಕಾಠಿಣ್ಯ, ಸತ್ಯ ಮಿಥ್ಯ ಭಾವನೆಯೆಲ್ಲಾ ಮಾಯಾ ಪ್ರಭಾವದಿಂದಾದುದು. ಪುರುಷ, ಪ್ರಕೃತಿಗಳ ಸಂಬಂಧದಲ್ಲಿ ಮಾಯೆ ತನ್ನ ಪ್ರಭಾವವನ್ನು ಬೀರುತ್ತದೆ. ಲೋಕದ ಯಾವ ವ್ಯಾಪಾರವೂ ಪುರುಷ, ಪ್ರಕೃತಿಯನ್ನು ಬಿಟ್ಟಲ್ಲ. ಹೀಗೆ ಸರ್ವ ವ್ಯಾಪಾರವನ್ನೂ ಆಚ್ಛಾದಿಸುವ ಪುರುಷ – ಪ್ರಕೃತಿ ಸಂಬಂಧವನ್ನು ನಿರೂಪಿಸುವ ಶೃಂಗಾರವೇ ಆದಿರಸವೆಂದು ಅವರ ವಾದ.

ನವರಸಸಿದ್ಧಾಂತವನ್ನು ಕೆಲವು ಲಾಕ್ಷಣಿಕರು ಒಪ್ಪುವುದಿಲ್ಲ. ರಸಗಳು ಒಂಭತ್ತಲ್ಲ, ಎಂಟೆಂದೂ, ಎಂಟಲ್ಲ ನಾಲ್ಕೇ ಎಂದೂ ವಾದ ವಿವಾದಗಳು ನಡೆದಿವೆ. ಅವರ ದೃಷ್ಟಿಯಲ್ಲಿ ಹಾಸ್ಯ ಶೃಂಗಾರಕ್ಕಧೀನ, ಕರುಣಾ ಶಾಂತಕ್ಕಧೀನ, ಭೀಭತ್ಸ ಭಯಕ್ಕಧೀನ. ಪರಸ್ಪರ ಅನುವರ್ತಿಗಳಾದ ರಸಗಳಿಗೆ ಪ್ರತ್ಯೇಕ ಅಸ್ತಿತ್ವವೇ ಇಲ್ಲವೆಂದು ಅವರು ವಾದಿಸುತ್ತಾರೆ.

ರಸಕ್ರಿಯೆ ಸಿದ್ಧಿಸಬೇಕಾದರೆ ಮೂರು ಅಂಶಗಳು ಮುಖ್ಯ: ರಸೌಚಿತ್ಯ, ರಸನಿರೂಪಣಾಕೌಶಲ್ಯ, ರಸಿಕತೆ (ಅಥವಾ ರಸಗ್ರಾಹಿಯ ಸಂಸ್ಕಾರ).

ವಸ್ತುವಿಗುಚಿತವಾದ ಭಾವವಿರಬೇಕು. ವಸ್ತುವನ್ನವಲಂಬಿಸಿದ ರಸ ಯಾವ ಪ್ರಮಾಣದಲ್ಲಿ ಎಲ್ಲಿರಬೇಕೋ ಅಲ್ಲಿಯೇ ಇರಬೇಕು. ಅರಸನ ಮುಂದೆ ಸೇವಕ ತನ್ನ ಪ್ರಣಯ ಚಾರಿತ್ರ್ಯ ನಿರೂಪಿಸಿ ಅವನಿಂದ ತಿರಸ್ಕೃತನಾದರೆ ಅದು ಔಚಿತ್ಯದ ಲಕ್ಷಣವಲ್ಲ. ಶೂದ್ರಕಕವಿ ತನ್ನ 'ಮೃಚ್ಛಕಟಿಕ' ನಾಟಕದಲ್ಲಿ ಸಂಸ್ಥಾನಿಕನ ಅಸಂಸ್ಕೃತ, ಅನುಚಿತ ಪ್ರಣಯವನ್ನು ನಿರೂಪಿಸುತ್ತ ರಸೌಚಿತ್ಯದ ರೂಪರೇಷೆಯನ್ನು ಬಹಳ ಮಾರ್ಮಿಕವಾಗಿ ಬಿಡಿಸಿದ್ದಾನೆ. ರಸಾನುಭವ ವ್ಯಕ್ತಿಯ ನಡೆವಳಿಕೆ, ಅವನ ಸಂಸ್ಕಾರ, ಶಿಕ್ಷಣ, ಸಂಸ್ಕೃತಿಗಳನ್ನವಲಂಬಿಸುತ್ತದೆ. ತಾಯಿಯ ದುಃಖ ಒಂದೇ. ಆದರೆ ಮಗುವನ್ನು ಕಳೆದುಕೊಂಡ ರಾಜಕುಮಾರಿ ದುಃಖಿಸುವ ರೀತಿಗೂ ಕೂಲಿಯ ಹೆಣ್ಣುಮಗಳು ದುಃಖಿಸುವ ರೀತಿಗೂ ವಿಶೇಷ ಅಂತರವಿದೆ. ಒಬ್ಬಳಿಗೆ ಶಿಕ್ಷಣ, ಸಂಸ್ಕಾರ ಸಂಯಮುವನ್ನು ತಂದುಕೊಟ್ಟವೆ. ಅವಳು ದುಃಖವನ್ನು ಹಿಡಿತದಲ್ಲಿ ಇಟ್ಟುಕೊಳ್ಳಬಲ್ಲಳು. ತನ್ನ ಒಳಗಿನ ಕಳವಳ ಎಲ್ಲರ ಕಣ್ಣಿಗೂ ಬೀಳದಂತೆ ಮುಚ್ಚಿಡಬಲ್ಲಳು. ಕೂಲಿಯ ಹೆಣ್ಣುಮಗಳಿಗೆ ಅಂಥ ಶಿಕ್ಷಣ ದೊರೆತಿಲ್ಲ. ಅವಳು ತನ್ನ ದುಃಖವನ್ನು ಬಿಚ್ಚಿ ಬಿಚ್ಚಿ ತೋಡಿಕೊಂಡು ಗಟ್ಟಿಯಾಗಿ ಪ್ರಲಾಪ ಮಾಡಿದರೇ ಸಮಾಧಾನ.

ರಸ ಬಹಳ ಸೂಕ್ಷ್ಮವಾಗಿ ತಂತಿಯಮೇಲೆ ನಡೆಯುವ ವ್ಯಾಯಾಮಪಟುವಿನಂತೆ ಹರಿಯುತ್ತಿರುತ್ತದೆ. ಅದರ ನಡೆಗೆ ಕುಂದು ಒಂದರೆ ಅಥವಾ ಅದರ ಹಾದಿಯಲ್ಲಿ ಅಡ್ಡದಾರಿಗಳು ಚಾಚಿಕೊಂಡರೆ ಅದರ ಪ್ರಗತಿ ಮುರಿದು ಬೀಳುತ್ತದೆ. ಇಂಥ ಅಡ್ಡಿ ಆತಂಕಗಳಿಂದ ರಸ ನೀರಸವಾಗುತ್ತದೆ, ರಸಾಭಾಸಕ್ಕೆ ಎಡೆಕೊಡುತ್ತದೆ. ಕಠೋರ ಉಪವಾಸ ಕೈಗೊಂಡವನು ಅದರ ಮೇಲೆ ಮೊಳ ಮೊಳದುದ್ದ ವ್ಯಾಖ್ಯೆ ಮಾಡುತ್ತ ಬಂದರೆ ರಸಭಾಸವಾಗುತ್ತದೆ. ಪ್ರಣಯಿನಿಯನ್ನು ಕಾಣಲು ಧಾವಿಸುತ್ತಿದ್ದವನು ಸಾವಕಾಶವಾಗಿ ದಾರಿಯಲ್ಲಿ ಸಿಕ್ಕಿದ ಗೆಳೆಯನೊಂದಿಗೆ ಹರಟೆಹೊಡೆಯುತ್ತ ನಿಂತರೆ ರಸಾಭಾಸವಾಗುತ್ತದೆ.

ರಸಾಭಾಸ ಒಂದೊಂದು ವೇಳೆ ಬೇರೆ ರಸಕ್ಕೆ ಎಡೆ ಕೊಡುವುದುಂಟು. ಈಶ್ವರನನ್ನು ಕಡೆಯ ಹೊರಟ ಶಿಲ್ಪಿ ಗಣಪತಿಯನ್ನು ಕಡೆದಿಟ್ಟರೆ ರಸಾಭಾಸವಾಗುತ್ತದೆ. ಎಲ್ಲ ರಸಗಳ ಆ ಭಾಸವೂ ಒಂದು ಬಗೆಯ

ವಿಕೃತಹಾಸ್ಯಕ್ಕೆ ಎಡೆಕೊಡುತ್ತದೆ. ರಸದ ಶುದ್ಧಸ್ವರೂಪವನ್ನು ಯಾವಾಗ ಒಂದು ಕೃತಿ ಕಳೆದುಕೊಳ್ಳುವುದೋ ಅದಕ್ಕೆ ರಸಮಾಲೆಯಲ್ಲಿ ಸ್ಥಾನವಿಲ್ಲ. ರೌದ್ರವನ್ನು ತೋರಿಸ ಹೋದ ನಟ ತನ್ನ ವಿಪರೀತ ವರ್ತನದಿಂದ ಹಾಸ್ಯಕ್ಕೆಡೆಕೊಟ್ಟರೆ ಅದನ್ನು ಹಾಸ್ಯರಸವೆಂದು ಪರಿಗ್ರಹಿಸ ಲಾಗುವುದಿಲ್ಲ. ರಸನಿರ್ಮಾತೃವಿನ ಗುರಿ ನೇರವಾಗಿದ್ದಂತೆ ಅವನ ನಿರ್ವಹಣವೂ ನೇರವಾಗಿರಬೇಕು. ಒಂದನ್ನು ಉದ್ದೇಶಿಸಿ ಒಂದನ್ನು ಸಾಧಿಸಬಾರದು. ಅನುಚಿತ ನಡೆವಳಿಕೆಯಿಂದ ಹುಟ್ಟುವ ರಸವೂ ರಸಾಭಾಸವೆಂದು ಅಭಿನವಗುಪ್ತನ ಮತ. ಸೀತಾದೇವಿಯ ಬಗ್ಗೆ ರಾವಣನಿಗೆ ಅಗಾಧವಾದ ಮೋಹವಿತ್ತು. ಆದರೆ ಅದು ಅಧರ್ಮ ಮಯವಾಗಿತ್ತು. ತಾನು ಬಯಸಬಾರದ ವಸ್ತುವನ್ನು ಅವನು ಬಯಸಿದ್ದ. ಅವನ ವರ್ತನೆ ಶೃಂಗಾರವಾಗುವುದಿಲ್ಲ, ಶೃಂಗಾರದ ಆಭಾಸ ವಾಗುತ್ತದೆ. ರಸಾಭಾಸಕ್ಕೆ ಅನೌಚಿತ್ಯವೇ ಮೂಲಕಾರಣ. ಅನೌಚಿತ್ಯ ಎರಡು ಬಗೆಯಾಗಿರುತ್ತದೆ— ಅಸತ್ಯತ್ವ, ಅಯೋಗ್ಯತ್ವ.

ಕಾವ್ಯ, ಕಲಾಕೃತಿಗಳಲ್ಲಿ ರಸೌಚಿತ್ಯ ಬರಬೇಕಾದರೆ ಅದಕ್ಕೆ ಕೃತಿ ಕರ್ತನ ಸಂಸ್ಕಾರದ ನೆರವು ಬೇಕು. ಅದಕ್ಕೂ ಹೆಚ್ಚಾಗಿ ಅವನ ಸಾಧನೆಯ ಪ್ರಬಲಶಕ್ತಿಯ ಬಲ ಬೇಕು. ಪ್ರತಿಯೊಂದು ಅನುಭವ ವನ್ನೂ ಸ್ಪಷ್ಟವಾಗಿ ನಿಷ್ಕೃಷ್ಟವಾಗಿ ನೋಡುವ ಕಣ್ಣು ಅವನು ಬೆಳಸಿ ಕೊಂಡಿರಬೇಕು. ಇದಕ್ಕೇ ವೇದದಲ್ಲಿ ಕವಿಯನ್ನು ದೃಷ್ಟಾರನೆಂದೂ, ಋಷಿಯೆಂದೂ ಸಂಬೋಧಿಸುವುದು.

ರಸವಿದೆ — ಅದನ್ನು ಅವಲಂಬಿಸಿದ ವಸ್ತುವೂ ಸಿದ್ಧವಾಗಿದೆ. ಆದರೆ ರಸ— ವಸ್ತುಗಳ ಸಮನ್ವಯವಾಗಬೇಕಾದರೆ ರಚಕನಲ್ಲಿ ಕೌಶಲ್ಯ ವಿರಬೇಕು. ಇದೇ ಪ್ರತಿಭೆ. ಅವನು ಔಚಿತ್ಯವನ್ನರಿತಿರಬೇಕು ಮಾತ್ರವಲ್ಲ, ರಸ ತನ್ನ ಸಹಜಸೌಂದರ್ಯದಿಂದ ಮೆರೆಯಬಲ್ಲಂತೆ ಮಾಡಬಲ್ಲ ತಂತ್ರಕೌಶಲ್ಯವೂ ಅವನಲ್ಲಿರಬೇಕು. ಬಹಳ ಹುಂದಿಗೆ ನಗೆ ಮೊಗದ ಕೃಷ್ಣನ ಮೂರ್ತಿ ಚೆನ್ನು. ಅದನ್ನು ಚಿತ್ರದಲ್ಲಿ, ಶಿಲ್ಪದಲ್ಲಿ ಮೂಡಿಸಬಲ್ಲುದನ್ನು ಕೆಲವರು ಬಲ್ಲರು. ಈ ಅಭಿರುಚಿ, ಕೌಶಲ್ಯಗಳನ್ನು ಕಲಾವಿದ ತನ್ನ ಪ್ರತಿಭೆಯಿಂದ ಕೂಡಿಸಬೇಕು. ತಾನು ಅನುಭವಿಸಿದ

ಸುಖದುಃಖವನ್ನು ಹಲವರು ಅನುಭವಿಸಬಲ್ಲಂತೆ ಮಾಡಬಲ್ಲ ಹದನು ಅವನಿಗೆ ಗೊತ್ತಿರಬೇಕು. ಅವನು ರಸಾನುಭವಿಯಾಗಿ, ಆ ಅನುಭವವನ್ನು ಎಲ್ಲರ ಮನದಲ್ಲಿ ಬಿತ್ತಬಲ್ಲ ಜಾಣನಾಗಿರಬೇಕು.

ಕಲಾವಿದನ ಪ್ರಯತ್ನ ಪೂರ್ಣಸಿದ್ಧಿಯನ್ನು ಪಡೆಯಬೇಕಾದರೆ ರಸಗ್ರಾಹಿಯೂ ಕಲಾವಿದನಷ್ಟೇ ರಸವೇತ್ತನಾಗಿರಬೇಕು. ಗ್ರಾಮ್ಯ ವಾಸಿಗಳ ಮುಂದೆ ಪಿಕಾಸೋ, ಸೆಜಾನ್, ಜಾಮಿನಿರಾಯರ ಚಿತ್ರಗಳನ್ನು ಹಿಡಿದರೆ ಅವರು ನಕ್ಕು ಅವುಗಳನ್ನು ಹೀಗೆಳೆಯಬಹುದು.

ರಸಿಕತೆ ರಸಿಕನ ಶಿಕ್ಷಣ, ಸಂಸ್ಕಾರಗಳನ್ನವಲಂಬಿಸುವಂತೆ ಅವನ ಹುಟ್ಟು, ವಾತಾವರಣವನ್ನೂ ಆಶ್ರಯಿಸುತ್ತದೆ. ಭಾರತೀಯ ಸಂಗೀತದಲ್ಲಿ ನಿಪುಣನಾದವನು ಕೂಡ ಐರೋಪ್ಯ ಸಂಗೀತವನ್ನು ಕಂಡು ಬೇಸರಪಟ್ಟು ಕೊಳ್ಳಬಹುದು. ಭಾರತೀಯ ಕಲಾಸೂತ್ರಗಳ ಪರಿಚಯವಿಲ್ಲದ ಐರೋಪ್ಯ ಅಜಂತಾ, ತಾಜಮಹಲುಗಳನ್ನು ಕಂಡು ನಗಬಹುದು. ಕಲೆ ಒಂದು ಜನಾಂಗದ ಆಚಾರ ವಿಚಾರ, ಪರಂಪರೆ, ಜನತೆಯ ಸಂಸ್ಕೃತಿ ಗಳನ್ನವಲಂಬಿಸುತ್ತದೆ. ಅವುಗಳ ಪರಿಚಯವಿಲ್ಲದವರಿಗೆ ಕಲಾಕೃತಿ ರೂಕ್ಷವಾಗಿ ಕಂಡುಬರುತ್ತದೆ.

ರಸಿಕನಾದವನು ಎಲ್ಲ ವಿಧದಲ್ಲಿಯೂ ಕಲಾವಿದನಷ್ಟೇ ನಿಷ್ಣಾತ ನಾಗಿರಬೇಕು. ಕಲಾವಿದ ರಸೋತ್ಪತ್ತಿಗೆ ಯಾವ ದಾರಿಯಲ್ಲಿ ನಡೆದು, ಯಾವ ಏರುಪೇರುಗಳನ್ನು ದಾಟಿ, ಯಾವ ಪರಿಪಾಕವನ್ನು ಮಾನಸಿಕ ವಾಗಿ ದೊರಕಿಸಿಕೊಂಡಿರುತ್ತಾನೋ ಅದೇ ಅನುಭವ ರಸಿಕನದೂ ಆಗಿರ ಬೇಕು. ಅದೇ ಮಟ್ಟದಲ್ಲಿ ರಸಿಕನೂ ನಿಲ್ಲಬೇಕು. ಆಗ ಅವನಿಗೆ ಕಲಾಕೃತಿಯ ಮಹತ್ವದ ಅರಿವುಂಟಾಗುತ್ತದೆ. ಸಹೃದಯತೆಯನ್ನು ಸಾಧಿಸದೆ ಕಲಾಕೃತಿಗಳನ್ನು ನಿರೀಕ್ಷಿಸುವುದು ನಿರರ್ಥಕ. ರಸಿಕ ಕಲಾವಿದನ ದೃಷ್ಟಿಕೋಣದಲ್ಲಿ ಸಂಪೂರ್ಣ ಸಹಾನುಭೂತಿಯುಳ್ಳವನಾಗಿ, ಅವನ ಪ್ರಸ್ಥಾನದಿಂದ ಕಲಾಕೃತಿಯನ್ನು ಅಳೆಯಲು ಸಮರ್ಥನಾಗಿರಬೇಕು.

ಇಂಥ ಸಾಮರ್ಥ್ಯ ಹುಟ್ಟಿನಿಂದಾಗಲಿ ಶಿಕ್ಷಣದಿಂದಾಗಲಿ ದೊರೆಯು ವುದಿಲ್ಲ. ರಸಿಕನ ದೀರ್ಘ ಪ್ರಯತ್ನ, ಅನಂತ ಧ್ಯಾನ, ಆಳವಾದ ವಿಚಾರಗಳಿಂದ ಅವನಿಗೆ ರಸಗ್ರಹಿಕೆಯ ರಹಸ್ಯ ಕರಗತವಾಗುತ್ತದೆ.

---

# ಸಜೀವ ಸಾಹಿತ್ಯ

ನಮ್ಮ ಸಾಹಿತ್ಯದ ನವೋದಯವಾಗಿ ಅರ್ಧಶತಮಾನವಾಗಿದೆ ಯಾದರೂ 'ಸಾಹಿತ್ಯವೆಲ್ಲವರಿಗಿಲ್ಲ' ವೆಂಬ ಭಾವನೆ ಇನ್ನೂ ಹೋಗಿಲ್ಲ. ಸಾಹಿತ್ಯ ಪಂಡಿತರು, ವಿವಿಧ ಕಳಾಮಂಡಿತರಿಗೆ ಮಾತ್ರ ನಿಲುಕವಂಥದು ಎಂಬ ಭಾವನೆಯೊಂದಿಗೆ, ಅದು ಕೆಲವು ಸ್ವಯಮಾಚಾರ್ಯರ ಸ್ವತ್ತೆಂಬ ಭಾವನೆಯೂ ಬೆಳೆದುಬಂದಿದೆ. ಜನತೆಯ ಮನೋವಿಕಾಸಕ್ಕೆ ಸಾಹಿತ್ಯ ಸಾಧನವೆಂಬ ಭಾವನೆ ಬೆಳಸಲು ಪ್ರಯತ್ನ ಸಾಕಷ್ಟು ಆಗಿಲ್ಲ. ಸಾಹಿತಿ ತನ್ನ ಸ್ವರ್ಣಮಂದಿರದಿಂದ ಹೊರಬೀಳಲೊಲ್ಲ; ಸಾಮಾನ್ಯ ತನ್ನ ಹೊಟ್ಟೆಯ ಹೋರಾಟದಲ್ಲಿ ಸಾಹಿತ್ಯಕ್ಕೆ ಗಮನ ಕೊಡಲೊಲ್ಲ. ಯುದ್ಧದ ದೆಸೆಯಿಂದ ಬಂಗಾಳ, ಬಿಹಾರ, ವಿಜಾಪುರ ಅಭೂತಪೂರ್ವ ಕ್ಷಾಮ ಗಳನ್ನು ಕಂಡವು; ಪ್ರಕೃತಿಯ ಆಡುಂಬೊಲವಾದ ಪ್ರದೇಶಗಳೂ ಅನ್ನ ನೀರು ಕಾಣದೆ ಕಂಗೆಟ್ಟವು. ಆದರೆ ಈ ಪರಿಸ್ಥಿತಿ ನಮ್ಮ ದೇಶದ ಇತಿಹಾಸ ದಲ್ಲಿಯಾಗಲಿ ಜಗತ್ತಿನ ಇತಿಹಾಸದಲ್ಲಿಯಾಗಲಿ ಹೊಸದಲ್ಲ. ತೈತ್ತಿರಿ ಯೋಪನಿಷತ್ತಿನ ಭೃಗುವಲ್ಲಿಯಲ್ಲಿ 'ಅನ್ನವನ್ನು ಬೆಳಸಬೇಕು. ಅದು ಒಂದು ವ್ರತವು. ಪೃಥಿವಿಯು ಅನ್ನವು. ಆಕಾಶವು ಅನ್ನವನ್ನು ಭಕ್ಷಿಸು ವುದು. ಪೃಥಿವಿಯಲ್ಲಿ ಆಕಾಶವು ಪ್ರತಿಷ್ಠಿತವು. ಅನ್ನದಲ್ಲಿ ಅನ್ನವು ಪ್ರತಿಷ್ಠಿತವಿದ್ದುದನ್ನು ಬಲ್ಲವನು ಪ್ರತಿಷ್ಠೆಯನ್ನು ಹೊಂದುತ್ತಾನೆ. ಅನ್ನ

ದಿಂದ ಸಮೃದ್ಧನೂ ಅನ್ನವನ್ನುಪಭೋಗಿಸುವವನೂ ಆಗುತ್ತಾನೆ. ಪ್ರಜಾ, ಪಶು, ಬ್ರಹ್ಮವರ್ಚಸ್ಸು ಕೀರ್ತಿಯುಕ್ತನಾಗಿ ಶ್ರೇಷ್ಠನಾಗುತ್ತಾನೆ "* ಎಂದು ಹೇಳಿದ ಋಷಿ ಸಮಕಾಲೀನ ಪರಿಸ್ಥಿತಿಗೆ ತನ್ನ ವ್ಯಾಖ್ಯಾನವಿತ್ತಿದ್ದಾನೆ. ಈ ಕೂಗು ಅಣಗದ ಕೂಗು. ಎಲ್ಲ ಭೇದ ಪಕ್ಷಪಾತಗಳು ಎಂದಳಿಯುವವೋ ಅಂದೇ ಅನ್ನದ ಕೂಗೂ ಅಳಿಯಬೇಕು. ಅನ್ನದ ಬೆಳೆ ಹಾಗೂ ಹಂಚಿಕೆ ರಾಷ್ಟ್ರರಕ್ಷಣಕ್ಕೆ ಎಷ್ಟು ಅಗತ್ಯವೋ ಅಷ್ಟೇ ಅಗತ್ಯ ಬುದ್ಧಿ, ಮನಸ್ಸುಗಳ ಬೆಳವಳಿಗೆ. ಅನ್ನ ಸಮಸ್ಯೆಯನ್ನು ಸಾಹಿತಿ ಮರೆಯುವುದೂ ಆತ್ಮವಿಕಾಸವನ್ನು ಜನತೆ ನಿರ್ಲಕ್ಷಿಸುವುದೂ ತಪ್ಪಾಗುತ್ತದೆ.

## ಅನಾಸಕ್ತಿ

ಜಗತ್ತಿನ ವಿಚಾರವೈಖರಿಯಲ್ಲಿ ಕ್ರಾಂತಿಯನ್ನುಂಟುಮಾಡಿದ ಭಗವದ್ಗೀತೆ ಬಹಳ ಹಿಂದೆ ಅನಾಸಕ್ತಿಯೋಗವನ್ನುಪದೇಶಿಸಿತು. ತನಗೆ ಅಗತ್ಯವಾದುದನ್ನು ದೊರಕಿಸಿಕೊಳ್ಳುವುದು ಎಷ್ಟು ಆವಶ್ಯಕವೊ ಅನಗತ್ಯವಾದುದನ್ನು ದೊರಕಿಸಿಕೊಳ್ಳುವುದೂ-ಶೇಖರಿಸುವುದೂ ಅಷ್ಟೇ ಪಾಪವೆಂಬ ಅಭಿಪ್ರಾಯ ರೂಢಿಯಲ್ಲಿತ್ತು. ತನಗೆ ಹೆಚ್ಚಾದುದನ್ನು ದಾನಧರ್ಮಗಳಲ್ಲಿ ವ್ಯಕ್ತಿ ವಿನಿಯೋಗಿಸುತ್ತಿದ್ದ. ನಾಗರಿಕತೆ ಬೆಳದಂತೆ ಮನುಷ್ಯನ ಆವಶ್ಯಕತೆಗಳೂ ಬೆಳೆಯುತ್ತ ಹೋದವು. ಸಹಜ ಜೀವನದಿಂದ ದೂರನಾದ ಮಾನವ ಅನಾದ್ಯ ವಸ್ತುಗಳನ್ನೆಲ್ಲಾ ಕೇವಲ ಅವಶ್ಯಕವಾದುದೆಂದು ಪರಿಗಣಿಸಲಾರಂಭಿಸಿದ. ಇದರ ಜತೆಗೆ ಇತರರಿಗಿಂತಲೂ ಹೆಚ್ಚು ಶೇಖರಿಸಿ ತನ್ನ ಅಪಾರ ಧನಧಾನ್ಯಗಳ ಪ್ರಭಾವದಿಂದ ಅವರನ್ನು ಅಧೀನರನ್ನಾಗಿ ಮಾಡಿಕೊಳ್ಳಬೇಕೆಂಬ ಚಾಪಲ್ಯವೂ ಬೆಳೆಯಿತು. ಹಿಂದಿನವರ ಧರ್ಮದೃಷ್ಟಿ,

---

* ಅನ್ನಂ ಬಹುಕುರ್ವೀತ ।। ತದ್ವ್ರತಮ್ ।। ಪೃಥಿವೀವಾ ಅನ್ನಮ್ ।। ಆಕಾಶೋಽನ್ನಾದಃ ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ ।। ಆಕಾಶೇ ಪೃಥಿವಿ ಪ್ರತಿಷ್ಠಿತಾ ।। ತದೇತದನ್ನ ಮನ್ನೇಪ್ರತಿಷ್ಠಿತಮ್ ।। ಸಯ ಏತದನ್ನಮನ್ನೇಪ್ರತಿಷ್ಠಿತಂ ವೇದಪ್ರತಿತಿಷ್ಠತಿ ।। ಅನ್ನವಾನನ್ನಾದೋಭವತಿ ।। ಮಹಾನ್ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ ।। ಮಹಾನ್ಕೀರ್ತ್ಯಾ ।।

ಇಂದು ಬೇಕೆನಿಸುವ ಸಾಮ್ಯವಾದವನ್ನು ಅನಗತ್ಯವೆನಿಸಿತ್ತು. ಸಂಪತ್ತಿನ ಸಮಾನ ಹಂಚಿಕೆಯಾಗುತ್ತಿದ್ದುದು ಮಾತ್ರವಲ್ಲದೆ ಸಂಪತ್ತನ್ನು ಆರ್ಜಿಸಿದವನು ಎಲ್ಲರಿಗಿಂತ ಕಡಿಮೆ ತೆಗೆದುಕೊಳ್ಳುತ್ತಿದ್ದ. ಯಾವ ಕಾಲದಲ್ಲಿ ಈ ಸೂತ್ರ ಸಡಿಲವಾಯಿತೊ ಆಗ ಕ್ಷಾಮ, ಯುದ್ಧ, ಪಿಡುಗು ಮೊದಲಾದ ಮಹಾವಿಪತ್ತುಗಳು ಸಂಭವಿಸಿದವು.

ಅನ್ನದ ಪ್ರಶ್ನೆ ಹಾಗೂ ಸಮಾಜದ ಸುವ್ಯವಸ್ಥೆ ದೇಶದ ರಾಜಕಾರಣಿಗಳಿಗೆ ಹೇಗೆ ಸೇರಿದುದೊ ಹಾಗೇ ಸಾಹಿತಿಗೂ ಸೇರಿದುದು. ದೇಶದ ಜ್ಞಾನವಾಹಿನಿಯನ್ನು ಸರಿಯಾದ ಮಾರ್ಗಗಳಿಗೆ ತಿರುಗಿಸುವ ಹೊಣೆ ಅವನದು. ವಿಚಾರವನ್ನು ಬೆಳಸಿ ಜೀವಂತ ಸಮಸ್ಯೆಗಳನ್ನು ನಿರ್ಭಯದಿಂದ ಎದುರಿಸಿ, ಅವುಗಳ ಸಿಕ್ಕುಗಳನ್ನು ಬಿಡಿಸುವ ವಿಧಾನವನ್ನು ತಿಳಿಸಿಕೊಡುವುದು ಅವನ ಕರ್ತವ್ಯಭಾಗ. ರಾಜ್ಯಕ್ಕೆ ಆಪತ್ತು ಒದಗಿದಾಗ ಪಂಪ, ಜನ್ನರಂತಹ ಕವಿಗಳು ಕತ್ತಿಹಿರಿದು ನಿಂತರು. ದೇಶದಲ್ಲಿ ನವಪ್ರಾಣಪ್ರತಿಷ್ಠೆ ಮಾಡಬೇಕಾದ ಸಂದರ್ಭವೊದಗಿದಾಗ ರವೀಂದ್ರ, ವಲ್ಲತ್ತೋಳ್, ಭಾರತಿ, ಕೇಶವಸುತ, ಶಾಂತಕವಿಗಳು ತಮ್ಮ ಕಾವ್ಯವಾಣಿಯನ್ನು ಆ ಕೆಲಸಕ್ಕೆ ಮೀಸಲು ಮಾಡಿದರು. ಇಂಗ್ಲೆಂಡ್, ಫ್ರಾನ್ಸ್, ಐರ್ಲೆಂಡ್, ರಷ್ಯಾ ದೇಶಗಳಲ್ಲಿ ಕವಿಗಳು ಸಾಮಾನ್ಯ ಸೇನಾನಿಗಳಂತೆ ದೇಶದ ಮುಕ್ತಿಗೋಸ್ಕರ ಹೋರಾಡಿದ್ದಾರೆ. ಸಾಹಿತ್ಯವೆಂಬ ಮಡಿಕೋಟೆಯನ್ನು ಕಟ್ಟಿಕೊಂಡು ಸುತ್ತಮುತ್ತಲಿನ ಜಗತ್ತಿನ ಹಾಹಾಕಾರದ ಮೇಲೆ ಅವಕುಂಠನ ಹಾಕಿ ತನ್ನ ಭಾವಪ್ರಪಂಚದಲ್ಲಿ ಮೈಮರೆಯುವ ಸಾಹಿತಿ ತನ್ನ ಅಥವಾ ದೇಶದ ಹಿತವನ್ನು ಸಾಧಿಸಲಾರ. ಅಂಥವರ ಬಗ್ಗೆ ಮಯಾಕೊವಸ್ಕಿ ದೊಡ್ಡ ಉದ್ಗಾರ ತೆಗೆದಿದ್ದಾನೆ:

“ ಕೇಳಿ, ಸಾಹಿತ್ಯ ಬಂಧುಗಳೇ ! –
ಚಹದಲ್ಲಿ ಕಣ್ಣು ಮುಳುಗಿಸಿ ಕುಳಿತಿರುತ್ತೀರಿ.
ಪೂರ್ಣಪಾತ್ರೆಗಳಿಂದ ಕಣ್ಣೆತ್ತಿ ನೋಡಿರಿ !
ಕೇಶಪಾಶಗಳಿಂದ ಕಿವಿಗಳನ್ನು ಬಿಡಿಸಿ ಕೇಳಿರಿ !
ಸಣ್ಣ ಚಾಕುವಿಗೆ ಹೆದರುವ ವೀರರೇ
ಸುವರ್ಣಯುಗದ ರಕ್ಷಕರೆಂದು ಸೋಗುಹಾಕುವ ಸಾಹಿತಿಗಳೇ,

ಇಂದಿನ ಬಗ್ಗೆ ಏನು ಬರೆಯಬಲ್ಲಿರಿ ?
ಯಾವ ವಕೀಲನ ಕಾರಕೂನನೂ
ನಿಮಗಿಂತ ಜೀವನವನ್ನು ಹತ್ತುಪಾಲು ಹೆಚ್ಚು ಬಲ್ಲ
ಶಿಷ್ಟ ಕವಿಗಳೇ,
ಪುಟಗಳು, ಅರಮನೆಗಳು, ಪ್ರೇಮ, ಕಮಲದ ಹೂಗಳು
ಇವು ನಿಮಗಿನ್ನೂ ಬೇಸರವಾಗಿಲ್ಲವೇನು ?
ನಿಮ್ಮಂಥವರು ಸೃಷ್ಟಿಕರ್ತರಾದರೆ
ಕಲೆಗೆ ನನ್ನ ಧಿಕ್ಕಾರವಿರಲಿ.
ಇದಕ್ಕಿಂತ ಒಂದಂಗಡಿ ತೆರೆಯುವುದು
ಸ್ಟಾಕ್ ಎಕ್ಸ್‌ಚೇಂಜಿಗೆ ಹೋಗಿ ಕಿಸೆ ತುಂಬುವುದು
ಪಕ್ಕದ ಕಳ್ಳಂಗಡಿಗೆ ಹೋಗಿ ಕುಡಿದು ಹಾಡುವುದು
ಹೆಚ್ಚು ಶ್ರೇಯಸ್ಕರ.
ಆದರೆ ನಿಮಗೊಂದೇ ಆಸೆ
ಆ ನಿಮ್ಮ ಕೂದಲು ರಾಶಿಯನ್ನು
ತೀಡಿ ಬಾಚುವುದು – ಏಕೆ ?
ಕೆಲಹೊತ್ತಿರಲು ಅಷ್ಟು ಪ್ರಯತ್ನ ನಿರರ್ಥಕ
ಸದಾ ಬಾಚುತ್ತಿರುವುದು ಅಸಾಧ್ಯ. ? ”

ಮಯಾಕೊವಸ್ಕಿಯ ಮಾತು ರಷ್ಯಾಗಿಂತ ಕರ್ನಾಟಕಕ್ಕೆ ಹೆಚ್ಚು ಅನ್ವಯಿಸುತ್ತದೆ. ಸಾಹಿತ್ಯ ನಮ್ಮಲ್ಲಿ ಪ್ರವೃತ್ತಿಯೂ ಆಗಲಿಲ್ಲ— ವೃತ್ತಿಯೂ ಆಗಲಿಲ್ಲ. ಅದೊಂದು ಹೊತ್ತುಕಳೆಯುವ ಸಾಧನ- ಸಾಹಿತಿಯೇ ತನ್ನ ವೃತ್ತಿಯನ್ನು ಹೊತ್ತುಕಳೆಯುವ ಸಾಧನವೆಂದು ಬಗೆದಮೇಲೆ ಓದುಗರ ಪಾಡೇನು? ಅವರ ಮೇಲೆ ಸಾಹಿತಿ ಯಾವ ಪ್ರಭಾವಮುದ್ರೆಯನ್ನೊತ್ತಬಲ್ಲ ?

## ಹೊಸಗನ್ನಡ ಸಾಹಿತ್ಯ

ಕಳೆದ ನಲವತ್ತೈದು ವರ್ಷಗಳ ನಮ್ಮ ಸಾಹಿತ್ಯ ಪ್ರಗತಿಯನ್ನು ಗಮನಿಸಿದರೆ ಮಯಾಕೊವಸ್ಕಿ ಬಿರುಸಾಗಿ ನುಡಿದಿದ್ದರೂ ಸತ್ಯವನ್ನೇ

ನುಡಿದಿದ್ದಾನೆಂದು ಭಾಸವಾಗದಿರದು. ಹೊಸಗನ್ನಡ ಸಾಹಿತ್ಯ ಕೆಂಪೂ ನಾರಾಯಣನಿಂದ ಆರಂಭವಾದದ್ದು ಮುದ್ದಣ್ಣನಿಂದ ಬೆಳೆಯಿತು. ಇವರಿಬ್ಬರ ಮೇಲೂ ಆಂಗ್ಲಸಂಸ್ಕೃತಿ ತನ್ನ ಅಭಯಹಸ್ತವನ್ನಿಟ್ಟಿರಲಿಲ್ಲ. ಅಲ್ಲಿಂದ ಮಂಗಳೂರು ಕಡೆ ಕೆಲವರು, ಮೈಸೂರು ಕಡೆ ಬಿ. ಎಂ. ಶ್ರೀಕಂಠಯ್ಯನವರೂ ಅವರ ಶಿಷ್ಯರು, ಭಕ್ತರು ಪುಂಖಾನುಪುಂಖವಾಗಿ ಇಂಗ್ಲಿಷ್ ಸಾಹಿತ್ಯ, ಗ್ರೀಕ್ ಸಾಹಿತ್ಯಗಳಿಂದ ಕನ್ನಡಕ್ಕೆ ಕೃತಿಗಳನ್ನು ತಂದರು. ಕನ್ನಡ ಸಾಹಿತ್ಯವನ್ನು ಇಂಗ್ಲಿಷ್ ಸಾಹಿತ್ಯದ ಪಡಿಯಚ್ಚು ಮಾಡಿಬಿಟ್ಟರೆ ತಮ್ಮ ಕರ್ತವ್ಯ ಮುಗಿಯಿತು ಎನ್ನುವ ಮನೋಭಾವ ಈ ಕಾಲದ ಸಾಹಿತಿಗಳಲ್ಲಿ ಕಂಡುಬಂತು. ರಾಷ್ಟ್ರದಲ್ಲಿ ಹೊಸಯುಗವಾರಂಭವಾಗಿತ್ತು. ಗಾಂಧೀಜಿ ತಮ್ಮ ಪಂಚಾಸ್ತ್ರಗಳನ್ನು ಹೂಡಿದ್ದರು. ಸ್ವಾತಂತ್ರ್ಯದ ಕೂಗು ಪ್ರತಿಯೊಂದು ಪ್ರಾಂತ್ಯದಲ್ಲಿಯೂ ಪ್ರತಿಧ್ವನಿಯಾಗಿತ್ತು. ಕರ್ನಾಟಕದಲ್ಲಿ ಆ ಪಾಂಚಜನ್ಯ ಊದಿದವರು ಆಲೂರ ವೆಂಕಟರಾಯರು. ಕನ್ನಡಿಗರಿಗೆ ಸ್ವಸ್ವರೂಪಜ್ಞಾನ ಮಾಡಿಕೊಡುವ ಗತವೈಭವ, ವೀರರತ್ನಗಳು ಎರಡು ಗ್ರಂಥರತ್ನಗಳನ್ನು ಬರೆದಿತ್ತರು. ಕನ್ನಡ ಜನ ಕಣ್ದೆರೆದು ವೆಂಕಟರಾಯರ ಮಾರ್ಗವನ್ನನುಸರಿಸಿತು. ಶ್ರೀಕಂಠಯ್ಯನವರೂ ಹಿಂದುಳಿಯಲಿಲ್ಲ. ಅವರೂ ಕನ್ನಡ ನಾಡಿನ ವೈಭವವನ್ನು ಹಾಡತೊಡಗಿದರು. ಕನ್ನಡ ಜನಕ್ಕೆ ಮೊದಲು ಕನ್ನಡತನದ ಅರಿವಾದರೆ ರಾಷ್ಟ್ರಾಭಿಮಾನ ಹುಟ್ಟದಂತೆಯೇ ಎಂದು ವೆಂಕಟರಾಯರು ಸಾರಿದರು.

ಕನ್ನಡೋದಯದ ತರುಣದಲ್ಲಿ ಕೆರೂರು ವಾಸುದೇವಾಚಾರ್ಯರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಟಿ. ಪಿ. ಕೈಲಾಸಂ ಕಥೆ ನಾಟಕಗಳನ್ನು ಬರೆದು ಕನ್ನಡ ಜನಜೀವನದ ಒಳಹೋಗಲು ಯತ್ನಿಸಿದರು. ವೆಂಕಟೇಶ ಅಯ್ಯಂಗಾರ್ಯರ ಕಥೆಗಳಿಂದ ಸ್ಫೂರ್ತಿಗೊಂಡ ಕೆಲವು ತರುಣ ಲೇಖಕರು ಅವರ ಕಥೆಗಳ ಮಾದರಿಗಳನ್ನನುಸರಿಸಿ ಕಥೆಗಳನ್ನು ಬರೆದರು. ಈ ಕಾಲದ ಸಾಹಿತ್ಯ ಒಂದು ವಿಶೇಷ ಮಿತಿಗೊಳಗಾಯಿತು. ಸಾಹಿತಿ ಚಿತ್ರಿಸುವುದು ಜೀವನವನ್ನೇ — ಆದರೆ ಯಾವ ಜೀವನ? ಇಡಿಯಾದ ಜೀವನ ಯಾರ ಕೈಗೂ ನಿಲುಕುವ

ವಸ್ತುವಲ್ಲ. ಅದು ಆಕಾಶದಷ್ಟು ವಿಸ್ತಾರ, ಸಾಗರದಷ್ಟು ಆಳ. ಸಾಹಿತಿ ತಾನು ಕಂಡುಂಡ ಬಾಳನ್ನು, ತಾನು ಮೆಚ್ಚಿಕೊಂಡ ಬಾಳನ್ನೆ ಮಾತ್ರ ಚಿತ್ರಿಸಬಲ್ಲ. ಆಕಾಲದ ಸಾಹಿತಿಗಳು ಒಂದು ವರ್ಗಕ್ಕೆ ಸೇರಿದವರು. ಅವರ ಸಾಹಿತ್ಯಸೃಷ್ಟಿ ಆ ವರ್ಗವನ್ನು ಬಿಟ್ಟು ಹೊರಬರಲಿಲ್ಲ. ದಿನದಿನದ ಜೀವನಕ್ಕೆ ಬೇಕಾಗುವುದಕ್ಕಿಂತ ಸ್ವಲ್ಪ ಹೆಚ್ಚು ಗಳಿಸುವವರನ್ನು 'ಮಧ್ಯಮ ವರ್ಗ' ಎಂದು ಗಣಿಸುವುದಾದರೆ ಅವರ ಅಲ್ಪಆಸೆ, ತೃಪ್ತಿ, ಕೋಪ, ತಾಪಗಳನ್ನೇ ಆ ಕಾಲದ ಸಾಹಿತ್ಯ ಚಿತ್ರಿಸಿತು. ಅವುಗಳನ್ನು ನೋಡಿದಾಗ ನಮ್ಮ ಜನಾಂಗವೆಲ್ಲಾ ಇಂಥ ಜನದಿಂದಲೇ ತುಂಬಿದೆಯೇ ಎನ್ನುವ ಪ್ರಶ್ನೆ ಸಹಜವಾಗಿ ಏಳುತ್ತದೆ

### ಸಾಹಿತಿ, ವರ್ಗ

ವರ್ಗಸಾಹಿತ್ಯದ ಬಗ್ಗೆ ಪ್ರಸ್ತಾಪಮಾಡಿದಾಗ ಸಾಹಿತಿಗೂ ವರ್ಗವೈಷಮ್ಯಕ್ಕೂ ಸಂಬಂಧವಿಲ್ಲವೆಂದು ವಾದಿಸುವವರುಂಟು. ತನಗೆ ಸಂಬಂಧವಿಲ್ಲವೆಂದು ಸಾಹಿತಿ ಯಾವದನ್ನೂ ಹೊರದೂಡುವುದಿಲ್ಲ. ಜಗತ್ತಿನ ಪ್ರತಿಯೊಂದು ವಿಷಯವೂ ಅವನ ಕುಲುಮೆಗೆ ಸೇರಿದೆ. ವರ್ಗವೈಷಮ್ಯವನ್ನು ಸಾಹಿತಿ ಕೆರಳಿಸುವುದಿಲ್ಲ. ಆದರೆ ಆದರಿಂದ ಒಂದು ಪಕ್ಷಕ್ಕೆ ಅನ್ಯಾಯವಾಗುತ್ತಿದ್ದರೆ ಅವನು ಶಾಂತನಾಗಿರುವುದಿಲ್ಲ. ಅನ್ಯಾಯ, ಕ್ರೌರ್ಯ, ದಬ್ಬಾಳಿಕೆ ಯಾರಲ್ಲಿ ಎಲ್ಲಿ ಕಂಡುಬಂದರೂ ಅವನು ಸಿಡಿದೇಳುತ್ತಾನೆ. ಮೈಖೇಲ್ ಲಿಫ್‌ಷಿಟ್* ಅವರು ಹೇಳುವಂತೆ "ಸಾಹಿತ್ಯದಲ್ಲಿ ವರ್ಗಸಮರವೆಂದರೆ ಅಧಿಕಾರ, ದಾಸ್ಯ, ಧರ್ಮದ

---

* "The class struggle in literature is the struggle of the people's tendencies against the idealogy of domination and slavery, against religious sterility, against cruelty, against polite insolence and suavity. To apply this class point of view to the entire history of world art is not by any means equivalent to pigeonholling works of art into various compartments or social groups. No, it means to really understand the artistic heritage and to evaluate everything that is great in it; to understand its deviations, its collapses, and its contradictions, and to judge these in the light of a

ಬರಡುತನ, ಕೌರ್‍ಯ, ಕೃತ್ರಿಮ ವಿನಯ, ಉಪಶಮನ ತಂತ್ರಗಳನ್ನು ವಿರೋಧಿಸುವ ಜನತೆಯ ಲಕ್ಷ್ಯ. ಜಗತ್ತಿನ ಕಲಾ ಇತಿಹಾಸಕ್ಕೆ ಈ ದೃಷ್ಟಿಕೋನವನ್ನು ಹಚ್ಚುವುದರಿಂದ ಅವುಗಳನ್ನು ಬಗೆಬಗೆಯ ಗುಂಪುಗಳಿಗೆ ಸೇರಿಸಿದಂತಾಗುವುದಿಲ್ಲ. ಕಲೆಯ ಪಾರಂಪರ್ಯವನ್ನರಿತು, ಅವುಗಳಲ್ಲಿ ದೊಡ್ಡದಾಗಿರುವುದಕ್ಕೆ ಬೆಲೆಕಟ್ಟುವುದೇ ಅದರ ಗುರಿ. ಅವುಗಳು ಹಿಡಿದ ಅಪಮಾರ್ಗ, ಪತನ, ಪರಸ್ಪರ ವಿರೋಧಗಳನ್ನು ಈಚಿನ, ಹೆಚ್ಚು ಸ್ಪಷ್ಟವಾದ ವರ್ಗವಿಭಜನೆ ಮತ್ತು ಸಾಮಾನ್ಯ ಮಾನವನ ಹೋರಾಟದ ದೃಷ್ಟಿಯಿಂದ ನಿರ್ದೇಶಿಸುವುದೇ ಆದರ ಗುರಿ.” ವರ್ಗಸಮಸ್ಯೆ ಕ್ರಿ. ಪೂ. ಐದನೆಯ ಶತಮಾನದಲ್ಲಿಯೇ ಭಾರತದಲ್ಲಿ ತಲೆದೋರಿರಬೇಕು. ಅಂದಿನ ಗಾಂಧಿಯಾಗಿದ್ದ ಶ್ರೀಕೃಷ್ಣ ‘ಎಲ್ಲಾ ವರ್ಣಗಳೂ ನನ್ನವು’ ಎಂಬ ಸಾಮ್ಯವಾದವನ್ನು ಬೋಧಿಸಿದ. ಆದರೆ ಮುಂದೆ ಮತಗಳು ಬೆಳದಂತೆ, ದೇಶದ ಆರ್ಥಿಕ, ರಾಜಕೀಯ ಪರಿಸ್ಥಿತಿ ಬದಲಾಯಿಸಿದಂತೆ ಹೊಸ ಹೊಸ ವರ್ಗಗಳು ಹೊಸ ಹೊಸ ಸಮಸ್ಯೆಗಳು ಹುಟ್ಟಿಕೊಂಡವು. ಆದರೀ ವರ್ಗಗಳನ್ನೆಲ್ಲಾ ಒಂದುಗೂಡಿಸುವ ತಂತುವಿರಲೇಬೇಕು. ಒಂದು ತಂತುವಿನಿಂದಲೇ ಸಿಡಿದು ವರ್ಗಗಳು ಹುಟ್ಟಿಕೊಂಡವು. ಅಂಥ ತಂತುವನ್ನು ಸಾಹಿತಿ ಅರಸುತ್ತಾನೆ.

## ಸಾಹಿತ್ಯದ ಮೂಲ

ಎಲ್ಲ ಸಾಹಿತ್ಯ ಕಲೆಗಳ ಉಗಮಕ್ಕೂ ಸಾಮಾನ್ಯ ಜನತೆಯೇ ಮೂಲ. ರಾಮಾಯಣವನ್ನು ರೆಚಿಸಿದವನು, ಗೀತೋಪದೇಶ ಮಾಡಿದವನು, ಅಜಂತೆಯ ಚಿತ್ರಗಾರರು ಜನಪದದ ಪ್ರತಿನಿಧಿಗಳು. ಉತ್ತಮ ಕಲೆಯ ತಾಯಿಬೇರು ಸಾಮಾನ್ಯ ಜೀವನಲ್ಲಿ ಅಡಗಿದೆ. * ಸಾಹಿತ್ಯ

subsequent much clearer demarcation of classes, in the light of the contemporary struggle of the proletariat." MIKHAIL LIFSHITZ in "Literature and Marxism"

* "Art belongs to the people. It must have its deepest roots in the broad mass of workers. It must be understood by them."

—"Reminiscences of Lenin" by CLARA ZETKIN.

ಪಂಡಿತ ಪಾಮರ ರಂಜಕವಾಗಬೇಕೆಂದು ಪ್ರಾಚೀನ ಭಾರತೀಯರು ನಂಬಿದ್ದುದೂ ಈ ದೃಷ್ಟಿಯಿಂದಲೇ. ಆದರೆ ಸಾಹಿತಿ ಸಾಮಾನ್ಯ ಜನತೆಯ ಸಂಪರ್ಕವನ್ನು ನೀಗಿಕೊಂಡು ವಿಲಾಸವರ್ಗದ ಕೈಗೊಂಬೆಯಾದಾಗ ಅವನು ತನ್ನ ಬುಡವನ್ನೇ ಕಡಿದುಕೊಂಡ. ಮಳೆಹನಿಯನ್ನು ಮರೆತು ಮರದ ಹನಿಗೆ ಬಿಂದಿಗೆ ಹಿಡಿಯುವಂತಾಯಿತು ಅವನ ಪಾಡು. ಸಾಹಿತಿ ತಾನು ಯಾವ ವರ್ಗದಲ್ಲಿ ಹುಟ್ಟಿರಲಿ ಸಾಮಾನ್ಯ ಜನತೆಯ ಸಂಬಂಧವನ್ನು ನಿಕಟವಾಗಿಟ್ಟುಕೊಳ್ಳಬೇಕು. ಮಾನಸಿಕವಾಗಿ ಅವನು ಅವರಲ್ಲಿ ಒಬ್ಬನಾಗಬೇಕು. ಅವರ ಸುಖದುಃಖಗಳೇ ತನ್ನವೆಂದು ಭಾವಿಸಿ ಅನುಭವಿಸುವವರೆಗೆ ಅವನ ಚೇತನ ಬೆಳೆಯಬೇಕು. ಮೇಲುವರ್ಗಕ್ಕೆ ಸೇರಿದ್ದ ವಾಲ್ಟೇರ್, ಪ್ರಿನ್ಸ್ ಕ್ರೊಪಾಟ್‍ಕಿನ್, ವಾಷಿಂಗ್‍ಟನ್ ಅವರು ತಮ್ಮ ದೇಶಗಳ ಮಹಾಕ್ರಾಂತಿಗೆ ಕಾರಣರಾದರು. ರಾಜ್ಯದ ಮಹಾಮಂತ್ರಿ ಪದವಿಯಲ್ಲಿದ್ದ ಬಸವಣ್ಣನವರು ಅದ್ಭುತ ಕ್ರಾಂತಿಪುರುಷರಾದರು. ಚಿನ್ನದ ತೊಟ್ಟಿಲಿನಲ್ಲಿ ಬೆಳೆದ ಪಂಡಿತ ಜವಾಹರಲಾಲ ನೆಹರೂ ಅವರು 'ಜನತಾ ಸರ್ಕಾರ'ದ ಕಹಳೆಯನ್ನೂದಿದರು. ಹುಟ್ಟಿನ ಹಾಗೂ ವಾತಾವರಣದ ಕಟ್ಟನ್ನು ಹರಿದೊಗೆದು ಕ್ರೊಪಾಟ್‍ಕಿನ್, ನೆಹ್ರೂ ಅವರಂತೆ ಜನಪದದೊಂದಿಗೆ ತಾದಾತ್ಮ್ಯಪಡೆಯುವುದು ಅತಿ ಸುಲಭದ ಕೆಲಸವಲ್ಲ; ಆದರೆ ಅದು ಅಸಾಧ್ಯವಾದುದೂ ಅಲ್ಲ.

## ನವೋದಯ ಕಾಲ

ನವೋದಯ ಕಾಲದಲ್ಲಿ ಬಂದ ಕನ್ನಡ ಸಾಹಿತಿಗಳು ಜನಪದವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಲಿಲ್ಲ. ಅವರ ಕೃತಿಗಳಲ್ಲಿ ಕೆಲವು ಜನಪದದ ಆಚಾರ, ವಿಚಾರಗಳನ್ನೇ ಎತ್ತಿ ಹಿಡಿದಿವೆ. ಹಳ್ಳಿಗರ ಮೇಲೆ, ಕೂಲಿಗಾರರ ಮೇಲೆ ಕಥೆ, ನಾಟಕ ಬರೆದರೆ ಅದು ಜನಪದದ ಸಾಹಿತ್ಯವಾಗುವುದಿಲ್ಲ. ಸಾಹಿತಿ ಅವರನ್ನು ತನ್ನ ಕೃತಿಯ 'ಕಚ್ಚಾಮಾಲು' ಎಂದು ಭಾವಿಸಬಹುದು. ಅವರ ಜೀವನದಲ್ಲಿ ಕಾಣಬರುವ ನಾಟಕೀಯತೆ ಅವನನ್ನು ಸೆರೆಹಿಡಿದಿರಬಹುದು. ಇಂತಹ ಕೃತಿಗಳಲ್ಲಿ ಕಂಡುಬರುವುದು ಅಂತಃಕರಣವಲ್ಲ— ಕುತೂಹಲ. ಸಾಹಿತಿ ತಾನು ಉನ್ನತಾಸ್ಥಾನದಲ್ಲಿರುವೆನೆಂದು ಭಾವಿಸಿಕೊಂಡು ಸಾಮಾನ್ಯ ಜನಪದವನ್ನು ಕರುಣೆಯಿಂದ,

ಕೌತುಕದಿಂದ ನೋಡುತ್ತಾನೆ. ಮಹರ್ಷಿ ವಾಲ್ಮೀಕಿ ಕ್ರೌಂಚಪಕ್ಷಿಯ ವಿರಹವನ್ನು ಕುತೂಹಲದಿಂದ ನೋಡಿ ಉದ್ಗಾರ ತೆಗೆಯಲಿಲ್ಲ. ಅದರ ದುಃಖದಲ್ಲಿ ಅವನು ತನ್ಮಯನಾದ. ಅವನ ಹೃದಯ, ಪಕ್ಷಿಯ ದುಃಖವನ್ನು ತನ್ನದೆಂದುಕೊಂಡು ಅನುಭವಿಸಿತು.

ಸಾಹಿತಿಯಲ್ಲಿ ಈ ಚೇತನ ಬೆಳೆದರೆ ಅವನಿಂದ ನಿರ್ಮಾಣವಾಗುವ ಸಾಹಿತ್ಯ ಅವಿನಾಶಿಯಾಗುವುದಲ್ಲದೆ, ಜನಪದಕ್ಕೆ ಹೊಸ ಬೆಳಕನ್ನು ನೀಡಿ ಅವರ ಬಾಳನ್ನು ಹಸನುಮಾಡುತ್ತದೆ. ನವೋದಯ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಪದದೊಂದಿಗೆ ಪೂರ್ಣ ಬೆರೆಯುವ ಮನೋಭಾವನೆ ಇರಲಿಲ್ಲ. ಆದ್ದರಿಂದಲೇ ಅದರಿಂದ ಅತೃಪ್ತಿ ಹುಟ್ಟಿತು.

ನವೋದಯದ ಹೊಳಪು ಸ್ವಲ್ಪ ಮಾಸುತ್ತಲೇ ಕನ್ನಡ ಸಾಹಿತ್ಯ ಮತ್ತೆ ಅಂಧಕಾರವನ್ನನುಭವಿಸಬೇಕಾಯಿತು. ದೇಶ ಮನೋವೇಗದಲ್ಲಿ ಮುಂದುವರಿಯತೊಡಗಿತು. ಕಲಿತವರಲ್ಲಿ ಮೂಡಿದ್ದ ಸ್ವಾತಂತ್ರ್ಯಾಸಕ್ತಿ ಹಳ್ಳಿ ಹಳ್ಳಿಗಳಲ್ಲಿ ರ್ಝೇಂಕರಿಸಿತು. ಆಗಸ್ಟು ೯ ದೇಶಾದ್ಯಾಂತ ಕ್ರಾಂತಿಯ ಬಿರುಗಾಳಿ ಬೀಸಿತು. ಪ್ರಗತಿಯ ವೇಗಕ್ಕೆ ಹೊಂದಿಕೊಳ್ಳಲಾಗದ ನವೋದಯದ ಸಾಹಿತಿಗಳು ತಮ್ಮ ನಕ್ಷತ್ರಗಳು, ಲತೆಗಳು, ಹೂಗಳು, ಚೆನ್ನೆಯರ ಮುಂಗುರುಳು, ದೇವ ದೇವತೆಯರನ್ನು ಕಟ್ಟಿಕೊಂಡು ವಿಶ್ರಾಂತಿಗೆ ತೆರಳಬೇಕಾಯಿತು. ಪರಿಸ್ಥಿತಿಗೆ ಹೊಂದಿಕೊಳ್ಳಲಾಗದ ದೌರ್ಬಲ್ಯ, ಹೊಂದಿಕೊಳ್ಳಲು ಸಾಧ್ಯವಿಲ್ಲದ ಜೀವನ ಸ್ಥಿತಿ ಅವರ ಧೃತಿ ಕೆಡಿಸಿತು. ಎರಡನೆಯ ಮಹಾ ಯುದ್ಧ ಕನ್ನಡ ಸಾಹಿತ್ಯದ ಬುನಾದಿಯನ್ನೇ ಅಲುಗಾಡಿಸಿತು.

## ಪ್ರಗತಿಶೀಲ ಸಾಹಿತ್ಯ

ಇಂತಹ ವಿಷಮುವೇಳೆಯಲ್ಲಿ ಕನ್ನಡ ಸಾಹಿತ್ಯವನ್ನು ಜೀವಂತ ಉಳಿಸಿದವರು ಪ್ರಗತಿಶೀಲ ಸಾಹಿತಿಗಳು. ನವೋದಯ ಕಾಲದ ಕವಿಗಳು ನಿರ್ವಿಣ್ಣರಾಗಿ ಕುಳಿತಾಗ ಪ್ರಗತಿಶೀಲರು ಜನಕ್ಕೆ ಧೈರ್ಯ, ಸ್ಥೈರ್ಯಗಳನ್ನು ನೀಡಿದರು. ಕಥೆ, ಕವಿತೆ, ಕಾದಂಬರಿ, ಪ್ರಬಂಧ, ಭಾಷಣಗಳ ಮೂಲಕ ಜನತೆಗೆ ಅದರ ಅಮರತ್ವವನ್ನು ಜ್ಞಾಪಿಸಿಕೊಟ್ಟರು. ಅವರ ಕೃತಿಗಳಲ್ಲಿ ಜೀವನವನ್ನು ಕಣ್ಣುಬಿಟ್ಟು ನೋಡುವ ನಿಷ್ಠೆಯೂ ಎದುರಿಸುವ

ಕೆಚ್ಚೊ ಕಂಡುಬಂದವು. ಹಳೆಯ ತತ್ವಗಳು ಪುನರ್ವಿಮರ್ಶೆಗೊಳಗಾದುವು. ಪರಂಪರಾಗತವಾಗಿ ಮೌಢ್ಯವನ್ನು ರೂಢಿಸಿಕೊಂಡು ಬಂದಿದ್ದ ಸಾಹಿತ್ಯ ವನ್ನು ಪ್ರಗತಿಶೀಲರು ಖಂಡಿಸುತ್ತ ಬಂದರು. ಜೀವನಕ್ಕೆ ಆಪುಕೊಟ್ಟು ಅದರ ನಿಸ್ಸಹಾಯ ಸ್ಥಿತಿಯನ್ನು ತಮ್ಮ ಪ್ರಯೋಜನಕ್ಕೆ ಬಳಸುವ ವೃತ್ತಿಯನ್ನು ತೀವ್ರವಾಗಿ ಎದುರಿಸಿದರು. 'ನಮ್ಮ ಬಾಳನ್ನು ಬೆಳೆಸುವ ಸಾಹಿತ್ಯ ಯಾವದು' ಎಂಬ ಪ್ರಶ್ನೆಯನ್ನು ಅವರು ಬಿಡಿಸಲೆತ್ನಿಸಿದರು. ಶಾಂತಿ ದುರ್ಬಲತೆಯಿಂದ ದೊರೆಯುವುದಿಲ್ಲ. 'ನಾಯಮಾತ್ಮಾ ಬಲ ಹೀನೇನ ಲಭ್ಯಃ'. ಕ್ರಾಂತಿಯಾದನಂತರವೇ ಶಾಂತಿ ಸಾಧ್ಯ. ಎಂದೋ ಆಗಿಹೋದ ಹರಿಶ್ಚಂದ್ರ ರಾಮರ ಸತ್ಯಪ್ರಿಯತೆಯನ್ನು ನೆನೆಯುತ್ತ ಕುಳಿತಲ್ಲಿ ಬಂದ ಲಾಭವೇನು ? ಪ್ರಭುದೇವರ ಮಾತಿನಲ್ಲಿ ಹೇಳಬೇಕಾದರೆ

ಕುರೂಪಿ ಸುರೂಪಿಯ ನೆನೆದಡೆ ಸುರೂಪಿಯಪ್ಪನೇ ?
ಆ ಸುರೂಪಿ ಕುರೂಪಿಯ ನೆನೆದಡೆ ಕೂರೂಪಿಯಪ್ಪನೇ ?
ಧನವುಳ್ಳವರ ನೆನೆದರೆ ದಾರಿದ್ರ್ಯ ಹೋಹುದೇ ?
ಪುರಾತನರ ನೆನೆದು ಕೃತಾರ್ಥರಾದೆವೆಂಬರು.
ತಮ್ಮಲ್ಲಿ ಭಕ್ತಿ ನಿಷ್ಠೆ ಇಲ್ಲದವರ ಕಂಡಡೆ
ಮೆಚ್ಚನು ಗುಹೇಶ್ವರಾ."

ಪ್ರಗತಿಶೀಲರ ವಾದವೈಖರಿ, ಜನತೆಯ ಮೇಲೆ ಅವರುಂಟು ಮಾಡಿದ ಪರಿಣಾಮ ನವೋದಯದ ಸಾಹಿತಿಗಳಲ್ಲಿ ತಳಮಳವನ್ನುಂಟು ಮಾಡಿತು. ಪ್ರಗತಿಶೀಲರ ಪ್ರಭಾವವನ್ನು ತಡೆಗಟ್ಟಲು ತೀಕ್ಷ್ಣಖಂಡನೆ ಗಳಾರಂಭವಾದುವು. ನವೋದಯ ಸಾಹಿತಿಗಳು ತಮಗೆ ಸಿಕ್ಕ ಪ್ರತಿ ಯೊಂದು ಅವಕಾಶ, ಸ್ಥಾನ, ಸ್ಥಳಗಳನ್ನು ಪ್ರಗತಿಶೀಲರ ವಿಧ್ವಂಸನಕ್ಕೆ ಉಪಯೋಗಿಸಿಕೊಂಡರು. ವಾದ ತತ್ವರಂಗವನ್ನು ಬಿಟ್ಟು ವ್ಯಕ್ತಿರಂಗಕ್ಕಿ ಳಿಯಿತು. ಖಂಡನೆಗಾರರಿಗೆ ಅಸತ್ಯವೇ ಆಯುಧವಾಯಿತು, ಪುರಾಣ ಪಾಂಡಿತ್ಯವೇ ಆಧಾರವಾಯಿತು. ಇನ್ನೇನು ಪ್ರಗತಿಶೀಲರು ನಿರ್ನಾಮ ವಾದರೆಂದು ಜಯಜಯಕಾರ ಮಾಡಿದರು— ತಮ್ಮ ಭಕ್ತವರ್ಗದಲ್ಲಿ ಮತ್ತು ಕ್ಲಾಸ್ ರೂಮುಗಳಲ್ಲಿ. ವ್ಯಕ್ತಿಯನ್ನವಲಂಬಿಸಿ, ಸ್ವಪ್ರತಿಷ್ಠೆಯ

ವಿಸ್ತರಣವನ್ನೇ ಗುರಿಯಾಗಿ ಪ್ರಗತಿಶೀಲರು ಇಟ್ಟುಕೊಂಡಿದ್ದರೆ ಈ ವಿರೋಧದ ಸಿಡಿಲು ಹೊಡೆತಕ್ಕೆ ಒರಗುತ್ತಿದ್ದರು. ಆದರೆ ಅವರ ವಿಚಾರ ಕೆಲವು ತತ್ತ್ವಗಳ ಭದ್ರ ಬುನಾದಿಯ ಮೇಲೆ ನಿಂತಿತ್ತು. ತತ್ತ್ವದ ಮುಂದೆ ವ್ಯಕ್ತಿ ಗೌಣ ಪ್ರಗತಿಶೀಲರು ಒಂದು ಗುಂಪಲ್ಲ, ಮತವಲ್ಲ. ಅವರೆಂದರೆ ರಾಷ್ಟ್ರದ ಪ್ರಾಗತಿಕ ಸ್ವರೂಪ. ಎಂದು ರಾಷ್ಟ್ರದ ಪ್ರಗತಿಗೆ ಅಡ್ಡಿಗಟ್ಟ ಬಹುದೋ ಅಂದು ಪ್ರಗತಿಶೀಲರನ್ನು ಮುರಿಯುಬಹುದು.

## ಕೆಲವು ಆಕ್ಷೇಪಣೆಗಳು

ಪ್ರಗತಿಶೀಲರ ವಿಚಾರವೈಖರಿಯ ಮೇಲೆ ಬಂದ ಆಕ್ಷೇಪಗಳನ್ನು ಗಮನಿಸಬಹುದು :

೧. ಪ್ರಗತಿಶೀಲರು ನಾಸ್ತಿಕರು, ಅವರು ರಾಮಾಯಣ ಭಾರತ ಗಳನ್ನು ತೆಗಳುತ್ತಾರೆ. ದೇವರಿಲ್ಲವೆಂದು ಸಾರುತ್ತಾರೆ.

ರಾಮಾಯಣ, ಭಾರತಗಳನ್ನು ಒಪ್ಪಿಕೊಳ್ಳದಿರುವುದು ನಾಸ್ತಿಕತೆಯ ಲಕ್ಷಣವಾದರೆ ಪ್ರಾಚೀನ ಜೈನ, ವೀರಶೈವ ಕವಿಗಳೆಲ್ಲಾ ನಾಸ್ತಿಕರಾಗು ತ್ತಾರೆ. ರಾಮಾಯಣ ಭಾರತಗಳ ಚರ್ವಿತಚರ್ವಣ ಸಾಕು. ದೈನಂದಿನ ಜೀವನದಲ್ಲಿ ಕಾಣುವ ಅವೇ ಆದರ್ಶಗಳ ದೃಷ್ಟಾಂತಗಳನ್ನು ನೋಡಿ. ಪ್ರತಿಯೊಂದು ಮನೆಯನ್ನೂ ಬೆಳಗುತ್ತಿರುವ ಕುಂತಿ, ಸೀತೆ, ಸಾವಿತ್ರಿಯ ರನ್ನು ಲಕ್ಷ್ಯದಲ್ಲಿಡಿ. ಹಿಂದಿನ ಹಾಡನ್ನೇ ಹಾಡುವ ಹವ್ಯಾಸದಲ್ಲಿ ಇಂದಿನ ಜೀವನವನ್ನು ಮರೆಯಬೇಡಿ. ರಾಮಾಯಣ, ಭಾರತ ನಮಗೆ ಬೇಕು. ಅದರವೇ ಸಾಕು ಎಂಬುದು ತಪ್ಪು. ಇದೇ ಪ್ರಗತಿಶೀಲರ ವಾದ.

ಪ್ರಗತಿಶೀಲರು ನಾಸ್ತಿಕರಲ್ಲ. ಆದರೆ ನವೋದಯವಾದಿಗಳು ಅರ್ಥಮಾಡಿಕೊಂಡಿರುವ ರೀತಿಯ ಆಸ್ತಿಕರೂ ಅಲ್ಲ. ಪ್ರಗತಿಶೀಲರ ದೇವರಿಗೆ ಮೂರು ತಲೆಯೂ ಇಲ್ಲ, ಹದಿನಾರು ಕೈಯೂ ಇಲ್ಲ. ಅವನು ನಾಗಭೂಷಣನೂ ಅಲ್ಲ, ಶೇಷಶಾಯಿಯೂ ಅಲ್ಲ. ಮನುಷ್ಯ ಯಾವಾಗ ದೇವರನ್ನು ತನ್ನ ಮಟ್ಟಕ್ಕೆ ಇಳಿಸಿ ಅವನಿಗೆ ಕೈಕಾಲು ಕೊಟ್ಟು, ಮುಂಜಿ ಮದುವೆ ಮಾಡಿಸಿದನೋ ಆಗ ದೇವರು ಸ್ಥಾನಭ್ರಷ್ಟನಾದ. ಪ್ರಭು ದೇವರು ಹೇಳುವಂತೆ

"ನಾ ದೇವನಲ್ಲದೆ ನೀ ದೇವನೆ ?
ನೀ ದೇವನಾದರೆ ಎನ್ನನೇಕೆ ಸಲಹೆ ?
ಆರೈದು ಒಂದು ಕುಡಿಕೆ ನೀರನೆರೆವೆ.
ಹಸಿದಾಗ ಒಂದು ತುತ್ತು ಓಗರವನಿಕ್ಕುವೆ.
ನಾ ದೇವ ಕಾಣಾ ಗುಹೇಶ್ವರಾ."

ಮಾನವ ಯಾವಾಗ ತನ್ನ ಚಿತ್ತವೃತ್ತಿಗನುಗುಣವಾಗಿ ದೇವರನ್ನು ರೂಪಿಸಲಾರಂಭಿಸಿದನೋ ಆಗ 'ನಾನು ರೂಪಿಸಿ, ಸಾಕಿದ ದೇವರೇ ಸತ್ಯ, ನಿನ್ನದು ಅಸತ್ಯ'ವೆಂಬ ಘರ್ಷಣೆ ಆರಂಭವಾಯಿತು. ನನ್ನ ದೇವರು ಹೆಚ್ಚು, ನಿನ್ನ ದೇವರು ಕಡಿಮೆಯೆಂಬ ಹೋರಾಟಕ್ಕೆಳಸುವ ದೇವರ ಕಲ್ಪನೆ ಬೇಡ. ಸತ್ಯ, ಸೌಂದರ್ಯ, ಶಕ್ತಿಗಳೆಲ್ಲಿರುವವೋ ಅದೇ ದೇವರು. ಗೀತೆಯಲ್ಲಿ ಭಗವಂತ ಹೇಳಿದ್ದಾನೆ 'ಯಾವ ಯಾವದು ಹೆಚ್ಚುಗಾರಿಕೆಯಿಂದ ಕೂಡಿದೆಯೋ, ಕ್ರಾಂತಿಯಿಂದ ಕೂಡಿದೆಯೋ ಹೆಚ್ಚುಬಲದಿಂದ ಕೂಡಿದೆಯೋ, ಅದನ್ನು ನನ್ನ ಮಹಿಮೆಯ ಅಂಶದಿಂದ ಹುಟ್ಟಿದ್ದೆಂದು ತಿಳಿ'* ಇಂತಹ ದೇವರು ಸರ್ವಾಂತರ್ಯಾಮಿ. ಎಲ್ಲ ಪ್ರಾಣಿಗಳ ರಕ್ಷಣೆ ಅವನನ್ನು ಕೂಡಿದುದು.

"ಆ ದೇವ ಈ ದೇವ ಮಾದೇವನೆನಬೇಡ
ಆ ದೇವರ ದೇವ ಭುವನ ಪ್ರಾಣಿಗಳಿ
ಗಾದವನೇ ದೇವ ಸರ್ವಜ್ಞ"

ಜ್ಞಾನಿ ದೇವರನ್ನು ಮೂಢನಂತೆ ಒಪ್ಪಿಕೊಳ್ಳುವುದಿಲ್ಲ. ಅವನನ್ನು ಅರಸುತ್ತಾನೆ. ಅದಕ್ಕಾಗಿ ಪರಿಪರಿಯ ಕಷ್ಟ ನಷ್ಟಗಳನ್ನನುಭವಿಸುತ್ತಾನೆ. 'ಊರಿಂಗೆ ದಾರಿಯನು ಯಾರು ತೋರಿದಡೇನು, ಸಾರಾಯದಾ ನಿಜವ ತೋರುವ ಗುರುವು ಯಾರಾದಡೇನು' ಎಂದು ಎಲ್ಲ ಗುರುಗಳನ್ನು, ಧರ್ಮಗಳನ್ನು, ಧರ್ಮ ಗ್ರಂಥಗಳನ್ನು ಆದರಿಸುತ್ತಾನೆ.

---

* ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥
––ಗೀತೆ.X : ೪೧.

ಪ್ರಗತಿಶೀಲರ ಧರ್ಮ, ದೇವರ ಕಲ್ಪನೆ ರೂಢಿಮೌಢ್ಯದಿಂದ ದೂರವಾಗಿದೆ. ವಿಚಾರ ಶೋಧನೆಯ ಕಸೋಟಿಗೆ ಹಚ್ಚದೆ ಅವರು ಯಾವುದನ್ನೂ ಒಪ್ಪಿಕೊಳ್ಳುವುದಿಲ್ಲ. ಈ ದೃಷ್ಟಿಯನ್ನು ನಾಸ್ತಿಕವಾದ ವೆನ್ನುವುದು ತಪ್ಪು. ಇದನ್ನು ವಿಚಾರವಾದ ಅಥವಾ ಹೈತುಕವಾದವೆಂದು ಕರೆಯಬೇಕು. ಪ್ರಗತಿಶೀಲರು ಹೈತುಕವಾದಿಗಳೆಂದು ಸ್ಥೂಲವಾಗಿ ನಿರ್ಧರಿಸಬಹುದು.

೨. ಪ್ರಗತಿಶೀಲರು ಕಮ್ಯುನಿಸ್ಟರು. ರಷ್ಯಾದ ವಿಚಾರಕ್ರಾಂತಿಯ ಪುರೋಹಿತರವರು. ಅವರಿಗೆ ನಮ್ಮದು ಕನಿಷ್ಠ, ರಷ್ಯಾದ್ದು ಜ್ಯೇಷ್ಠ-ಶ್ರೇಷ್ಠ.

ಈ ಬಗ್ಗೆ ಬೇರೊಂದು ಸಂದರ್ಭದಲ್ಲಿ ನಾನು ಹೇಳಿದ ಮಾತುಗಳನ್ನೇ ಉದಹರಿಸುತ್ತೇನೆ.

"ನಮ್ಮ ರಾಜಕೀಯ ಮಿತವಾದಿಗಳು(Liberals) ಪ್ರತಿಯೊಂದಕ್ಕೂ ಇಂಗ್ಲೆಂಡನ್ನೇ ಆದರ್ಶವಾಗಿ ಪರಿಗ್ರಹಿಸಿರುವಂತೆ ನಮ್ಮ ದೇಶದ ವಿಧವಿಧ ರಾಜಕೀಯ ಬಣಗಳು ಜರ್ಮನಿ, ಜಪಾನ್, ಅಮೇರಿಕಾಗಳಿಂದ ನಮ್ಮ ಉದ್ಧಾರವಾಗುತ್ತದೆಂದು ಭಾವಿಸುತ್ತಾರೆ. ಹಾಗೇ ರಷ್ಯಾದ ಕಡೆ ನೋಡುವವರೂ ಉಂಟು. ಜರ್ಮನಿ, ಅಮೇರಿಕಾ, ಜಪಾನ್, ರಷ್ಯಾ ಯಾವ ದೇಶದಿಂದಲೂ ಹಿಂದೂಸ್ಥಾನದ ಉದ್ಧಾರವಾಗುವುದಿಲ್ಲ. ನಮ್ಮ ಶಕ್ತಿ, ಸಾಮರ್ಥ್ಯ, ತ್ಯಾಗ, ಪರಾಕ್ರಮಗಳನ್ನವಲಂಬಿಸಿದೆ ನಮ್ಮ ಸ್ವಾತಂತ್ರ್ಯ.

"ಇಂಗ್ಲೆಂಡಿನ ಸ್ವಾತಂತ್ರ್ಯಧೋರಣೆ, ಮಿಲ್, ಬರ್ಕ್ ಅವರ ಆದರ್ಶ ವಾದದಿಂದ ನಮಗೆ ಬೆಳಕು ಬಂದಿದೆ. ಜರ್ಮನಿಯ ಕಾರ್ಲ್‌ಮಾರ್ಕ್ಸ್‌ನ ಸಮತಾವಾದ ನಮ್ಮ ಹೃದಯವನ್ನು ಹಿಡಿದಿದೆ. ಅಮೆರಿಕಾ ಜಪಾನ್ ದೇಶೀಯರ ವ್ಯವಹಾರ ನೈಪುಣ್ಯವನ್ನು ಕಂಡು ಬೆರಗಾಗಿದ್ದೇವೆ. ರಷ್ಯಾದ ಮೇಲ್ಪಂಕ್ತಿ, ಧೋರಣೆಗಳಿಂದ ಕಲಿಯತಕ್ಕದ್ದು ಬಹಳವಾಗಿದೆ. ಎಲ್ಲ ದೇಶಗಳ ಬಗೆಬಗೆಯ ದೀಪಗಳನ್ನು ಕೊಂಡು ನಮ್ಮ ಕೂಡುವ ಮನೆಯನ್ನು ಅಲಂಕರಿಸೋಣ. ಆದರೆ ನಮ್ಮ ದೇವರ ಮುಂದೆ ಹಚ್ಚಿಡಲು ಹರಳೆಣ್ಣೆ ಕುಡಿದ ನಂದಾದೀಪವೇ ಬೇಕು. ನಮ್ಮ ಆತ್ಮಪ್ರಣತೆಯಲ್ಲಿ ಬಾಳದೀವಿಗೆ

ಹಚ್ಚಿ ಸ್ವಾತಂತ್ರ್ಯದೇವಿಯನ್ನು ಆರಾಧಿಸಬೇಕು. ಭಾರತೀಯನಿಗೆ ಇದಕ್ಕಿಂತಲೂ ಶ್ರೇಯಸ್ಕರವಾದ ಮಾರ್ಗ ಇನ್ನೊಂದಿಲ್ಲ."

ರಷ್ಯಾದ ಮಹಾಕ್ರಾಂತಿ, ತರುವಾಯದ ರಾಜ್ಯವ್ಯವಸ್ಥೆ, ಆರ್ಥಿಕ ಸುಭದ್ರತೆಯ ನಿಯೋಜನೆಗಳನ್ನು ಪ್ರಗತಿಶೀಲರು ಮೆಚ್ಚುತ್ತಾರೆ. ಆದರೆ ಅದೇ ತಂತ್ರವನ್ನು ಭಾರತಕ್ಕೆ ಉಪಯೋಗಿಸಿ ಭಾರತವನ್ನು ಕಟ್ಟುವ ಕೆಲಸವನ್ನು ಸಾಧಿಸಬೇಕೆಂಬ ಅಭಿಪ್ರಾಯದ ಕಮ್ಯುನಿಸ್ಟ್ ಪಕ್ಷದ ಮತ ಪ್ರಗತಿಶೀಲರಿಗೆ ಮಾನ್ಯವಿಲ್ಲ. ರಷ್ಯಾ ದೇಶವನ್ನಾಗಲಿ ಬೇರೆ ಯಾವ ದೇಶವನ್ನಾಗಲಿ ಭಾರತ ಅನುಕರಿಸುವುದರಲ್ಲಿ ಅನುಸರಿಸುವುದರಲ್ಲಿ ಅದು ತನ್ನ ದಾಸ್ಯದ ಮೂಗುದಾರವನ್ನು ಒಬ್ಬರ ಕೈಯಿಂದ ಕಸಿದು ಬೇರೊಬ್ಬರ ಕೈಗಿತ್ತಂತಾಗುತ್ತದೆ. ಭಾರತದ ವಿಶಿಷ್ಟ ಸಮಸ್ಯೆಗಳಿಗನುಸಾರವಾಗಿ ಅದರ ಪರಿಹಾರೋಪಾಯಗಳೂ ನಿಯೋಜಿತವಾಗಬೇಕು. ಗಾಂಧೀಜಿ ಪರಿಹಾರೋಪಗಳನ್ನು ತೋರಿಸಿಕೊಟ್ಟಿದ್ದಾರೆ. ಅವರ ದರ್ಶನದಲ್ಲಿ, ನಾಯಕತ್ವದಲ್ಲಿ ಪ್ರಗತಿಶೀಲರಿಗೆ ಸಂಪೂರ್ಣ ನಂಬಿಕೆಯಿದೆ.

ರಷ್ಯಾ, ಅಮೇರಿಕಾ, ಇಂಗ್ಲೆಂಡು ಮೊದಲಾದ ಎಲ್ಲ ಬಲಿಷ್ಠ ಜನಾಂಗಗಳೊಂದಿಗೆ ಭಾರತ ಮೈತ್ರಿಯನ್ನು ಬೆಳಸಿಕೊಳ್ಳಬೇಕೆಂದು ಪಂಡಿತ ಜವಹರಲಾಲರ ಅಭಿಪ್ರಾಯವನ್ನು ಪ್ರಗತಿಶೀಲರು ಒಪ್ಪುತ್ತಾರೆ. **ದಾಸ್ಯದಿಂದ ಮೈತ್ರಿ ಸಾಧಿಸುವುದಿಲ್ಲ ಮೈತ್ರಿ ಯಾವಾಗಲೂ ಸಮಾನಧರ್ಮ, ಸಮಾನ ಶಕ್ತಿಯುಳ್ಳವರಲ್ಲಿಯೇ ಸಾಧ್ಯ.**

ರಷ್ಯಾ ಅನುಸರಿಸುತ್ತಿರುವ ಮಾರ್ಕ್ಸ್‌ವಾದದ (Marxism) ಬಗ್ಗೆ ಡಾ|| ರಾಧಾಕೃಷ್ಣನ್ ಅವರು ವ್ಯಕ್ತಪಡಿಸಿರುವ ಅಭಿಪ್ರಾಯ* ಪ್ರಗತಿಶೀಲರ ಅಭಿಪ್ರಾಯವನ್ನೇ ಕ್ರೋಢೀಕರಿಸಿದಂತಿದೆ.

---

* "In its concern for the poor and lowly, in its demand for a more equitable distribution of wealth and opportunity, in its insistence on racial equality it gives us a social message with which all idealists are in agreement. But our sympathy for the social programme does not necessarily commit us to the Marxist philosophy of life, its atheistic conception of ultimate reality, its naturalistic

"ಬಡವರ, ದಲಿತರ ಬಗ್ಗೆ ಮರುಕ ತೋರುವುದರಲ್ಲಿ, ಅವಕಾಶ ಮತ್ತು ಸಂಪತ್ತುಗಳ ಸಮಾನ ಹಂಚಿಕೆಯನ್ನು ಕೋರುವುದರಲ್ಲಿ, ವರ್ಣ ಸಮತೆಯನ್ನು ನಿರೀಕ್ಷಿಸುವಲ್ಲಿ ಅದು (ಮಾರ್ಕ್ಸ್‌ವಾದ) ಎಲ್ಲ ಆದರ್ಶ ವಾದಿಗಳೂ ಒಪ್ಪತಕ್ಕ ಸಾಮಾಜಿಕ ಸಂದೇಶವನ್ನು ನೀಡುತ್ತದೆ. ಆದರೆ ಸಾಮಾಜಿಕ ಕಾರ್ಯಕ್ರಮದ ಬಗ್ಗೆ ನಮಗಿರುವ ಸಹಾನುಭೂತಿ ಮಾರ್ಕ್ಸ್‌ರ ಜೀವನದರ್ಶನವನ್ನು ಒಪ್ಪಿಕೊಂಡಂತಲ್ಲ. ಪರವಸ್ತುವಿನ ಬಗ್ಗೆ ಅದು ತಳೆದಿರುವ ನಾಸ್ತಿಕಭಾವನೆ, ಮಾನವನ ಬಗ್ಗೆ ತಳೆದಿರುವ ವಾಸ್ತವದೃಷ್ಟಿ ಮತ್ತು ವ್ಯಕ್ತಿತ್ವದ ಪಾವಿತ್ರ್ಯತೆಯ ಬಗ್ಗೆ ತಳೆದಿರುವ ತಿರಸ್ಕಾರ ನಮ್ಮ ಸಹಾನುಭೂತಿಯನ್ನು ದೊರಕಿಸುವುದಿಲ್ಲ."

೩. ಪ್ರಗತಿಶೀಲರು ಅಶ್ಲೀಲ ಸಾಹಿತ್ಯೋಪಾಸಕರು. ಈ ಆಪಾದನೆ ಮಾಡತಕ್ಕವರು ಶೀಲಾಶ್ಲೀಲಗಳ ಭೇದವನ್ನರಿಯದವರು ಹಾಗೂ ಪ್ರಗತಿಶೀಲರ ಸಾಹಿತ್ಯವನ್ನು ಪರಾಮರ್ಶಿಸುವ ಗೋಜಿಗೆ ಹೋಗದವರು. ಸಮಾಜ ದಿಗ್ದರ್ಶನಕ್ಕೆ ಹೊರಟ ಸಾಹಿತಿ ತಾನು ಕಂಡ ಸತ್ಯವನ್ನು ಬಿಚ್ಚು ಮಾತಿನಿಂದ ನುಡಿದರೆ ಅದು ಅಶ್ಲೀಲವಾಗುವುದಿಲ್ಲ. ಸಮಾಜ ಶರೀರದ ಒಳಗೆ ಹುದುಗಿ ಅದರ ಮೂಳೆ ಮೂಳೆಯನ್ನು ಕೊರೆಯುತ್ತಿರುವ ಅಶ್ಲೀಲ ವನ್ನು ಅನೀತಿ ವ್ಯಾಪಾರವನ್ನು ಸಮಾಜ ಹಿತಚಿಂತಕನಾದ ಸಾಹಿತಿ ಎತ್ತಿ ತೋರಿಸಲೇ ಬೇಕು. ಅದರ ಮೇಲೆ ಮುಸುಕಿರುವ ರೇಷ್ಮೆವಸ್ತ್ರವನ್ನು ಸರಿಸಿ ಒಳಗೆ ಎಂತಹ ನಾತ ಬರುತ್ತಿದೆಯೆಂಬುದರ ಪರಿಚಯ ಲೋಕಕ್ಕೆ ಮಾಡಿಕೊಡಬೇಕಾಗುತ್ತದೆ. ಈ ಜಲಗಾರ ವೃತ್ತಿಯನ್ನು ಅವಲಂಬಿಸಿದ ಸಾಹಿತಿ ಅದರಲ್ಲಿ ವಿಲೀನನಾಗಿ ಕೊಳಚೆಯಲ್ಲಿಯೇ ಕಮಲದ ಸೌರಭವನ್ನು ಕಾಣುತ್ತಾನೆಂದು ಹೇಳುವುದು ಸತ್ಯದ ವಿಪರ್ಯಾಸ. ಸಮಾಜ ವಿಮರ್ಶೆ, ಸತ್ಯಕಥಾನಿರೂಪಣೆ, ಅಶ್ಲೀಲ ಸಾಹಿತ್ಯವಾಗುವುದಾದರೆ ಗಾಂಧೀಜಿಯವರ ಹರಿಜನ ಪತ್ರಿಕೆ, ಷೇಕ್ಸ್‌ಪಿಯರನ ನಾಟಕಗಳು, ಕಾಳಿದಾಸನ ಕೃತಿಗಳು, ಷೆಲ್ಲಿ, ರತ್ನಾಕರ ವರ್ಣಿ, ಸರ್ವಜ್ಞ ಇವರ ಕಾವ್ಯಗಳು ಅಶ್ಲೀಲವಾಗುತ್ತವೆ.

---

view of man and its disregard of the sacredness of personality."

Dr. S. Radhakrishnan in "KAMALA LECTURES."

ಪ್ರಗತಿಶೀಲರ 'ಗಾರ್ಕಿ', 'ರಸಋಷಿ', 'ಭಾರತಶಕ್ತಿ'ಗಳನ್ನು ನವೋದಯ ಶಿಲ್ಪಿಗಳ ಕೆಲವು ಕೃತಿಗಳಿಗೆ ನಿಷ್ಪಕ್ಷಪಾತದಿಂದ ಹೋಲಿಸಿನೋಡಿದರೆ ಅಶ್ಲೀಲ ಸಾಹಿತ್ಯ ಯಾರದೆಂಬ ನಿರ್ಣಯ ತಾನೇ ಒದಗುತ್ತದೆ. ಪ್ರಗತಿಶೀಲರ ಘೋರಣೆಯನ್ನು ಜೊಸೆಫ್ ಫ್ರೀಮನ್ನರ* ಮಾತುಗಳಲ್ಲಿ ಇಂತು ಸಂಗ್ರಹಿಸಬಹುದು :

೧. ಸಮಾಜದ ಪ್ರತಿಯೊಂದು ವರ್ಗಕ್ಕೂ ಪ್ರತ್ಯೇಕ ಆದರ್ಶ, ಸಾಹಿತ್ಯಗಳಿವೆ. ಶ್ರಮಜೀವಿಗಳೂ ಪ್ರತ್ಯೇಕ ಆದರ್ಶ, ಸಾಹಿತ್ಯಗಳಿವೆ.

೨. ಪ್ರಗತಿಶೀಲ ಲೇಖಕ (ಕ್ರಾಂತಿ ಲೇಖಕ) ಶ್ರಮಜೀವಿಗಳ ಆಸೆ ಆದರ್ಶಗಳನ್ನು ಪ್ರತಿಧ್ವನಿಸುವ ಕತೆ, ಕಾದಂಬರಿ, ನಾಟಕ, ಕವಿತೆಗಳನ್ನು ರಚಿಸುವುದಲ್ಲದೆ ಶ್ರಮಜೀವಿಗಳ ಹೋರಾಟದಲ್ಲಿ ಭಾಗವಹಿಸುತ್ತಾನೆ—ಅದರಲ್ಲಿಯೂ ಕೆಲಸಗಾರರ ವ್ಯವಸ್ಥೆಯಲ್ಲಿ.

೩. ಇಂದಿನ ಸಂಸ್ಕೃತಿಯನ್ನು ಬಂಡವಾಳಶಾಹಿ ಹಿಮ್ಮೆಟ್ಟಿಸುತ್ತದೆ. ಶ್ರಮಜೀವಿಗಳು ಪ್ರಾಚೀನ ಸಂಸ್ಕೃತಿಯ ಅತ್ಯುತ್ತಮವಾದುದರ ಉತ್ತರ ವಾದಿಗಳು ಮತ್ತು ಹೊಸ ಸಂಸ್ಕೃತಿಯ ಪ್ರವರ್ತಕರಾಗಿದ್ದಾರೆ. ಬಂಡವಾಳ ಶಾಹಿಯನ್ನು ಎದುರಿಸಿ, ಶ್ರಮಜೀವಿಗಳಿಗೆ ಸಹಾಯ ನೀಡಿ, ಹೊಸ ಸಂಸ್ಕೃತಿಯನ್ನು ಕಟ್ಟುವುದಕ್ಕೆ ಬುದ್ಧಿಜೀವಿಗಳು ತಮ್ಮ ಸಂಸ್ಥೆಗಳಲ್ಲಿಯೇ ಸಂಘಟಿತರಾಗುತ್ತಾರೆ.

೪. ಶ್ರಮಜೀವಿಗಳಿಗೆ ಸಹಾಯ ನೀಡಲು ಲೇಖಕರು ಅವರ ರಾಜ ಕೀಯಪಕ್ಷಗಳ ತತ್ವಗಳನ್ನು ಒಪ್ಪಬೇಕಾಗಿಲ್ಲ. ಸಂಸ್ಥಾವ್ಯವಸ್ಥೆಗೋಸುಗ ಅವರು ಕಾವ್ಯವನ್ನು ತೊರೆಯಬೇಕಾಗಿಲ್ಲ. ಅವರು ಬಂಡವಾಳಶಾಹಿಯ

---

* 1. Every social class has its own idealogy and its own literature. The proletariat has its own idealogy and its own literature.

2. The revolutionary writer not only creates novels, plays, and poems which voice the aspirations and and struggles of the workers, but himself participates actively in those struggles—directly—in the organization of workers.

ವಿರೋಧಿಗಳಾಗಿ, ಶ್ರಮಜೀವಿಗಳ ಪ್ರಧಾನ ಪ್ರಶ್ನೆಗಳ ಬಗ್ಗೆ ಸಹಾನುಭೂತಿಯುಳ್ಳವರಾದರೆ 'ಕ್ಲಾರ್ಟೆ' (ಪ್ರಗತಿಶೀಲ ಲೇಖಕರ ಸಂಘ) ಯಂತಹ ಸಾಹಿತ್ಯ ಸಂಸ್ಥೆಯೊಂದಿಗೆ ಸಹಕರಿಸಿ, ತಮ್ಮ ಸಾಹಿತ್ಯ ಸೃಷ್ಟಿಯನ್ನು ಶ್ರಮಜೀವಿಗಳ ಗೆಳೆಯರಂತೆ ಮುಂದುವರಿಸಬಹುದು.

## ಕೋಮುವಾರು ವ್ಯಾಧಿ

ಆದರೆ ಪ್ರಗತಿಯ ಹೆಸರಿನಲ್ಲಿ ಕನ್ನಡ ಸಾಹಿತ್ಯಪ್ರಪಂಚದಲ್ಲಿ ಈಚೆಗೆ ಮರುಕಳಿಸಿರುವ ಕೋಮುವಾರು ವ್ಯಾಧಿಯನ್ನು ನಿರ್ಲಕ್ಷಿಸುವುದಕ್ಕಾಗುವುದಿಲ್ಲ. ಸಾಹಿತ್ಯಕ್ಕೂ ಜಾತಿಗೂ ಸಂಬಂಧವಿಲ್ಲ. ಜಾತಿವೈಷಮ್ಯವನ್ನು ಪರಿಹರಿಸುವುದೇ ಸಾಹಿತಿಯ ಕರ್ತವ್ಯವಾಗಿರುವಾಗ ಅದರಲ್ಲಿ ತಾನೇ ಪ್ರಧಾನಪಾತ್ರ ವಹಿಸಿ ಪರಜಾತಿಗಳನ್ನು, ಮತಗಳನ್ನು ಧಿಕ್ಕರಿಸುವುದು ಸಾಹಿತಿಗೆ ಸಲ್ಲದ ಕೆಲಸ. ಇಂದು ಕ್ಷಿಪ್ರಪ್ರಾಧಾನ್ಯಕ್ಕೆ ಬರಲು ಹವಣಿಸುತ್ತಿರುವ ಕೆಲವು ಸಾಹಿತಿಗಳಲ್ಲಿ ಈ ರೋಗ ಉಲ್ಬಣಿಸಿದೆ. ಇದು ಕೇವಲ ವ್ಯಕ್ತಿಗೆ ಸಂಬಂಧಪಟ್ಟುದುದಾದರೆ ಇದನ್ನು ಗಮನಿಸುವ ಶ್ರಮವನ್ನು ನಾವು ತಪ್ಪಿಸಿಕೊಳ್ಳಬಹುದಾಗಿತ್ತು. ಆದರೆ ಕೋಮುವಾರು ವ್ಯಾಧಿ

---

3 Capitalism regards the development of culture to-day The proletariat is heir to the best of old culture, and the initiator of the new For the purpose of combating capitalism and aiding the proletariat, for the purpose of developing the new culture, intellectuals organize in their own organizations

4. It is not necessary for a writer to subscribe completely to the political program of the proletarian party in order to aid the workers. It is unnecessary for him to abandon poetry for organizational activity. If he is against capitalism and for the proletariat on fundamental questions, he can participate in a literary organization like 'CLARTE' and function in his own specific craft as an ally of the workers."

**Joseph Freeman** ***American Writers' Congress.***

(Communal Canker) ಅಂಟುರೋಗ. ಅಪರಿಮಿತ ವೇಗದಲ್ಲಿ ಅದು ವ್ಯಾಪಿಸುತ್ತಿದೆ. ಸಮಯೋಚಿತ ಹಾಗೂ ಕಾಲೋಚಿತ ಮುನ್ನೆಚ್ಚರಿಕೆ ತೆಗೆದುಕೊಳ್ಳದಿದ್ದರೆ ಸಾಹಿತ್ಯ ಪ್ರಪಂಚವೆಲ್ಲಾ ಈ ಪೀಡೆಗೆ ತುತ್ತಾಗ ಬೇಕಾದೀತು. ಒಂದು ಸಾಹಿತ್ಯಕೃತಿಯ ಯೋಗ್ಯತೆ ನಿರ್ಧಾರವಾಗುವುದು ಅದನ್ನು ರಚಿಸಿದವನ ಜಾತಿಯ ಮೇಲಲ್ಲ ಅಥವಾ ಅವನ ಹಿತವರ ಹೊಗಳಿಕೆಯ ಮೇಲೂ ಅಲ್ಲ. ಅದು ಕಾಲದ ಅಗ್ನಿಪರೀಕ್ಷೆಯಲ್ಲಿ ಗೆದ್ದು ಬರಬೇಕು. ತಮ್ಮ ಯಾವದೊ ಎಲ್ಲಿಯದೋ ದುಃಖವನ್ನು ಕೋಮುವಾರು ಭೂತವನ್ನೆಬ್ಬಿಸುವುದರ ಮೂಲಕ ಸಾಹಿತ್ಯಕ್ಕೆ ತರುವ ಸಾಹಿತಿ ಲೋಕದ ಹೆಮ್ಮಾರಿ.

ನಮ್ಮ ರಾಜಕೀಯ, ಸಾಮಾಜಿಕ ಜೀವನ ಕುಲಕೆಟ್ಟು ಹೋಗಿ ರುವುದು ಕೋಮುವಾರು ಭೂತಸ್ಥಾಪನೆಯಿಂದ. ಈ ಬೀದಿಯ ಮಾರಿ ಯನ್ನು ಮನೆಗೆ ಬರಮಾಡಿಕೊಳ್ಳುವುದು ಸಾಹಿತಿಗೆ ಭೂಷಣವಲ್ಲ; ಜನಾಂಗಕ್ಕೆ ಶ್ರೇಯಸ್ಕರವಲ್ಲ. ಉತ್ತಮ ಸಾಹಿತ್ಯ ಉತ್ತಮ ರಾಷ್ಟ್ರವನ್ನು ಬೆಳೆಸುವುದಕ್ಕೆ ಹೇತುವೆಂದು ನಂಬುವವರು ಇಂತಹ ವಿಷಯವಾಹಿನಿಗಳನ್ನು ತಡೆಗಟ್ಟಬೇಕು. ಕಲುಷಿತವಾಗಿರುವ ನಮ್ಮ ಸಾಮಾಜಿಕ ಜೀವನ ಮತ್ತಷ್ಟು ಕಲುಷಿತವಾಗಿ ಶಸ್ತ್ರಚಿಕಿತ್ಸೆಗೆ ಒದಗದಂತೆ ಎಚ್ಚರವಾಗಿರಬೇಕು.

## ಹಾಸ್ಯ

ಹಾಸ್ಯದ ಹೆಸರಿನಲ್ಲಿ ಅಸಹನೆಯನ್ನು ಹೆಚ್ಚಿಸುವ ಕೃತಿಗಳು ಬರುತ್ತಿರುವುದು ಶೋಚನೀಯ. 'ನಕ್ಕು ನಗಿಸುವಾ ನಗೆ ಲೇಸು' ಎಂದು ಸಾರಿದ ಸರ್ವಜ್ಞನ ಸುವರ್ಣಸಂದೇಶ ನಮ್ಮ ನಗೆಗಾರರ ಸ್ಮೃತಿಪಟಲದಲ್ಲಿ ಸದಾ ಇರಬೇಕು. ಉತ್ತಮ ನಗೆಗಾರ ತನಗೆ ಬೇಡವಾದವರನ್ನಷ್ಟೇ ಟೀಕಿಸುವುದಿಲ್ಲ, ಬೇಕಾದವರನ್ನೂ ಟೀಕಿ ಸುತ್ತಾನೆ. ಜೀವನದ ಕಾಳವೇಶ್ಮದ ಮೇಲೆ ನಗೆಮಲ್ಲಿಗೆಯನ್ನು ಚೆಲ್ಲುವ ಅವನ ಕೃತಿ ಪಕ್ಷ ಪ್ರತಿಪಕ್ಷಗಳ ಹೋರಾಟಕ್ಕೆ ಜಾತಿ ಮತ ಗಳ ವಿಫಲ ಕಾಳಗಕ್ಕೆ ತುತ್ತಾಗಬಾರದು. ಕೈಲಾಸಂ ಅವರ ನಿರ್ಮಲ ಹಾಸ್ಯಗಂಗೆ ಓತಪ್ರೋತವಾಗಿ ಹರಿದಿದೆ. ಇವರ ಕೃತಿಗಳು ನಮ್ಮ ಲೇಖಕರಿಗೆ ಮಾದರಿಗಳಾಗಲಿ.

## ರಾಜಕೀಯ ಸಾಹಿತ್ಯ

ಇಂದಿನ ಸಾಹಿತ್ಯದಲ್ಲಿ ರಾಜಕೀಯ ಛಾಯೆ ಹೆಚ್ಚಾಗಿ ಕಂಡು ಬರುತ್ತಿದೆ. ಅಗಸ್ಟ ೯ ರ ಮಹಾಕ್ರಾಂತಿ ಹಾಗೂ ಐ. ಎನ್ ಎ. ದಳದವರ ಸಾಹಸ ಚರಿತ್ರೆ ನಮ್ಮ ಸಾಹಿತ್ಯದಲ್ಲಿಯೂ ಚಿತ್ರಿತವಾಗಿವೆ. ಆದರೆ ಅವು ಸಾಕು ಸಾಲದಾಗಿವೆ; ಗುಣ, ಪ್ರಮಾಣ ಎರಡು ದೃಷ್ಟಿಯಿಂದ. ರಾಜಕೀಯನ್ನು ಬಳಸಿಕೊಳ್ಳುವಾಗ ಸಾಹಿತಿ ಉತ್ತಮ ಶಿಲ್ಪಿಯಾಗಿರಬೇಕು. ಕಲಾವಿದಗ್ಧತೆಯನ್ನು ಬಿಟ್ಟುಕೊಟ್ಟು ಅವನು ಬರದ ಬರೆವಣಿಗೆ ವರ್ತಮಾನಪತ್ರದ ವರದಿಯಾಗಬಹುದಲ್ಲದೆ ಸಾಹಿತ್ಯವಾಗಲಾರದು. 'ಘಾಂತಮಾರಾ— ಮಾರ್ಟಲ್ ಸ್ಟಾರಂ— ಫೇರ್‌ವೆಲ್ ಟು ಆರ್ಮ್ಸ್—ಫಾರ್ ಹೂಂ ದಿ ಬೆಲ್ ಟೋಲ್ಸ್—ರೇನ್‌ಬೋ—ಗ್ರೇಪ್ಸ್ ಆಫ್ ರಾತ್' ಮೊದಲಾದ ರಾಜಕೀಯ ಕಾದಂಬರಿಗಳನ್ನಾದರೂ ನಮ್ಮ ಲೇಖಕರು ಓದಿ ನೋಡಬೇಕು. ಆಗಸ್ಟ ಕ್ರಾಂತಿಯಲ್ಲಿ ಕನ್ನಡ ವೀರರು ಮಾಡಿದ ಸೇವೆ, ತೋರಿಸಿದ ಸ್ಥೈರ್ಯ ಇಂತಹ ಹತ್ತಾರು ಕಾದಂಬರಿಗಳನ್ನು ಬರೆಯಲು ವಸ್ತುವೊದಗಿಸುತ್ತದೆ. ಮೈಲಾರ ಮಹಾದೇವಪ್ಪ, ಚೆನ್ನಪ್ಪ ವಾಲಿ, ಈಸೂರು ಹುತಾತ್ಮರು, ಧನಶೆಟ್ಟಿ ಮಲ್ಲಪ್ಪ, ರಾಮದುರ್ಗದ ವೀರರು ಇವರ ಕಥೆ ಹಲವು ರೀತಿಯಲ್ಲಿ ನಮ್ಮ ಸಾಹಿತ್ಯವನ್ನು ಬೆಳಗಬೇಕು.

## ವಿಮರ್ಶೆ

ವಿಮರ್ಶೆಯ ಕಡೆಗೆ ನಮ್ಮ ಲಕ್ಷ್ಯ ಸಾಕಷ್ಟು ಹೋಗಿಲ್ಲ. ವಿಮರ್ಶೆಯನ್ನು ಒಂದು ಶಾಸ್ತ್ರವೆಂದು ಪರಿಗಣಿಸಿ ಅದನ್ನು ಶ್ರದ್ಧೆಯಿಂದ ಅಭ್ಯಾಸ ಮಾಡಿ ವಿಮರ್ಶೆಗೆ ತೊಡಗುವ ಲೇಖಕರು ತೀರ ವಿರಳ. ಜಾತಿಯ ಸೋಂಕು ಬೇರೆ ತಗಲಿ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿದ್ದ ಅಲ್ಪ ಸ್ವಲ್ಪ ಸತ್ಯದೃಷ್ಟಿಯೂ ದೂರವಾಗಿದೆ. ಪಕ್ಷ ಪ್ರತಿಪಕ್ಷಗಳ ರಾಜಕಾರಣವೇ ಸಾಹಿತ್ಯ ವಿಮರ್ಶೆಯ ಒರೆಗಲ್ಲಾಗಿದೆ.

ಸಾಹಿತ್ಯ ವಿಮರ್ಶೆ ಸಾಹಿತ್ಯ ನಿರ್ಮಾಣದಷ್ಟೇ ಗುರುತರವಾದದ್ದು. ಕವಿಯ ಅಂತರಂಗವನ್ನು ಬಿಚ್ಚಿಡಬಲ್ಲ ಶಕ್ತಿ ಅದ್ಭುತಶಕ್ತಿ. ವಿಮರ್ಶಕ ವಿಯ ವ್ಯಾಖ್ಯಾನಕಾರನೂ ಆಗುತ್ತಾನೆ, ಪರಿಪೋಷಕನೂ ಆಗುತ್ತಾನೆ.

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಪಾಪ ಪುಣ್ಯಗಳ, ತಕ್ಕಡಿಯಿಂದ ಆರಂಭವಾದ ವಿಮರ್ಶನ ರಸ, ಭಾವ, ಶಬ್ದ, ಅಲಂಕಾರಗಳನ್ನು ಪ್ರುಥಕ್ಕರಿಸುವವರಿಗೆ ಬೆಳೆಯಿತು.

ಸಾಹಿತ್ಯ ವಿಮರ್ಶೆಯನ್ನು ಮೂರು ಪ್ರಸ್ಥಾನಗಳಿಂದ ಮಾಡುವುದು ಯುಕ್ತವೆಂದು ಪ್ರೊ. ಲಾಸಲೆಸ್ ಆಬರ್‌ಕ್ರಾಂಬಿಯ ಅಭಿಪ್ರಾಯ. ೧) ಗ್ರಂಥ ಬರೆಯುವುದರಲ್ಲಿ ಗ್ರಂಥಕರ್ತನ ಉದ್ದೇಶವೇನು?—**ಶೋಧನೆ** ೨) ಉದ್ದೇಶ ಸಯುಕ್ತಿಕವಾದುದೆ?—**ನಿರ್ಣಯ** ೩) ಗ್ರಂಥ ಕರ್ತನ ಉದ್ದೇಶ ಈಡೇರಿದೆಯೆ? — **ವಿಮರ್ಶೆ.** ಈ ಮೂರು ಅವಸ್ಥೆಗಳಲ್ಲಿ ಹೆಚ್ಚು ಕಡಿಮೆ ವಿಮರ್ಶನ ತಂತ್ರವೆಲ್ಲಾ ಅಡಕವಾಗಿದೆ. ಸಾಹಿತ್ಯ ವಿಮರ್ಶೆ ಸದ್ಯಕ್ಕೆ ಕೇವಲ ಕೃತಿಯ ಹೊರ ರೂಪ, ರಚನೆ, ಕಟ್ಟಡಗಳನ್ನು ಮಾತ್ರ ಸಂಬಂಧಿಸಿದೆ. ಕಾಲೇಜು ಶಿಕ್ಷಣ ಮ್ಯಾಥ್ಯೂ ಆರ್ನಾಲ್ಡ್, ಸೇಂಟ್ಸ್‌ಬರಿ, ಬ್ರ್ಯಾಡ್ಲೆಗಳನ್ನು ಬಿಟ್ಟುಹೋಗುವುದಿಲ್ಲವಾದ್ದರಿಂದ ಕಾಲೇಜು ಶಿಕ್ಷಕರಾಗಿರುವ ನಮ್ಮ ಸಾಹಿತಿಗಳು ಬಹು ಮಂದಿ ಈ ವ್ಯೂಹದೊಳಗೇ ಇದ್ದಾರೆ.

ವಿಮರ್ಶೆಗೆ ತಂತ್ರದೃಷ್ಟಿಯಿಲ್ಲದೆ ಜನಾಂಗದ ನೋಟವೂ ಒಂದಿದೆ. ಪ್ರತಿಯೊಂದು ಕೃತಿಗೂ ಒಂದಲ್ಲ ಒಂದು ರೀತಿಯಲ್ಲಿ ಐತಿಹಾಸಿಕ ಸ್ಥಾನವಿದೆ. ಅದು ಒಂದು ಸುಪ್ತ ಅಥವಾ ಪ್ರಕಟಿತ ಪರಂಪರೆಯನ್ನೇ ಅನುಸರಿಸುತ್ತದೆ. ಸಾಹಿತ್ಯದ ಹಾಗೂ ಜನಾಂಗದ ಐತಿಹಾಸಿಕ ಬೆಳವಣಿಗೆಯನ್ನು ವಿಮರ್ಶೆ ಗಮನಿಸಬೇಕು. ಇತಿಹಾಸದ ಹಿನ್ನೆಲೆಯಲ್ಲಿ ಗ್ರಂಥ ಯಾವ ಸ್ಥಾನವನ್ನು ಸೇರಬಹುದೆಂದು ತೂಗಿನೋಡಬೇಕು.

ಲೇಖಕ ಶ್ರಮಜೀವಿಗಳ ವಿಶ್ವಾಸಿಯೆ? ಬಂಡವಾಳಗಾರರ ಕಹಳೆಯೆ ಎಂಬುದೊಂದು ಮಹತ್ವದ ಪ್ರಸ್ಥಾನ. ಅವನ ದೃಷ್ಟಿಯನ್ನು ಯಾವ ತತ್ವ, ಯಾವ ಗುರಿ, ಯಾವ ದರ್ಶನ ವ್ಯಾಪಿಸಿದೆಯೆಂಬುದನ್ನು ವಿಮರ್ಶಕ ತನ್ನ ಕ್ಷ-ಕಿರಣಶಕ್ತಿಯಿಂದ ಕಂಡುಕೊಳ್ಳುವವನಾಗಬೇಕು.

ಈ ನೂತನ ವಿಧಾನವನ್ನು ಪ್ರಗತಿಶೀಲ ಸಾಹಿತಿಗಳು ಪ್ರಯೋಗ ಮಾಡಿ ತೋರಿಸಿದ್ದಾರೆ.

## ಸಾಹಿತ್ಯ ಪ್ರಪಂಚ

ಸಾಹಿತ್ಯ ಪ್ರಪಂಚ ಲೇಖಕರು, ಪ್ರಕಾಶಕರು, ಪುಸ್ತಕವ್ಯಾಪಾರಿಗಳು ಹಾಗೂ ಓದುಗರ ಬಳಗ. ಇವರ ಕರ್ತವ್ಯ, ಪರಸ್ಪರ ಸಂಬಂಧಗಳನ್ನು ಕುರಿತು ಚರ್ಚಿಸುವುದು ಅಪ್ರಕೃತವಾಗಲಾರದು.

ಕನ್ನಡ ಲೇಖಕರಿಗೆ—ಅದರಲ್ಲಿಯೂ ಹೊಸ ಲೇಖಕರಿಗೆ ಒದಗುವ ಸಂಕಷ್ಟಗಳೇನು. ಅವರಿಗೆ ಯಾವ ಬಗೆಯ ಸಹಾಯ, ಸೌಲಭ್ಯಗಳ ನ್ನೊದಸಗಿಬೇಕೆಂಬ ವಿಷಯ ನಮ್ಮ ಸಾಹಿತ್ಯ ಸಂಸ್ಥೆಗಳನ್ನಾಗಲಿ ಹಿರಿಯರನ್ನಾಗಲಿ ಆಕರ್ಷಿಸಿಲ್ಲ. ಇಂದು ಹೊಸ ಲೇಖಕರು ದಿಕ್ಕು ಕಾಣದೆ ತೊಳಲಾಡುತ್ತಿದ್ದಾರೆ. ಕತೆ ಬರೆಯಬೇಕೆಂದು ಆಸೆ–ಬರೆಯು ವುದು ಹೇಗೆ? ಬರೆಯುವುದಕ್ಕೆ ಕತೆಯಿದೆ. ಆದರೆ ಬರೆಯುವ ರೀತಿ ಹೇಗೆ?. ಲೇಖಕ ಉತ್ತಮ ಶೈಲಿಯನ್ನು ದೊರಕಿಸಿಕೊಂಡಿರು ತ್ತಾನೆ. ಆದರೆ ವಸ್ತುವನ್ನೆಲ್ಲಿಂದ ತರುವುದು ಮೊದಲಾದ ಪ್ರಶ್ನೆಗಳು ಹೊಸ ಲೇಖಕರನ್ನು ಎಡಬಿಡದೆ ಕಾಡುತ್ತವೆ. ಕತೆ, ಕಾದಂಬರಿ ನಾಟಕ, ಪ್ರಬಂಧಗಳನ್ನು ಬರೆಯುವ ರೀತಿಯನ್ನು ತೋರುವ ತಂತ್ರ ಗ್ರಂಥಗಳ (Technical works) ಆವಶ್ಯಕತೆಯಿದೆ. ಹೊಸ ಲೇಖಕರ ಕೃತಿಗಳನ್ನು ಓದಿನೋಡಿ, ತಿದ್ದಿಕೊಟ್ಟು ಅವರಿಗೆ ದಾರಿ ತೋರುವವರು ಬೇಕು. ಮಾರ್ಗದರ್ಶನ ದೊರೆಯದೆ ಉತ್ತಮ ಲೇಖಕರಾಗುವವರು ಬೇಸತ್ತು ನಿರ್ವಿಣ್ಣರಾಗುತ್ತಿದ್ದಾರೆ. ತಂತ್ರ ಗ್ರಂಥಗಳನ್ನು ಪ್ರಕಟಿಸಿ, ಲೇಖಕರ ಕೃತಿಗಳ ವಿಮರ್ಶೆಯನ್ನು ಸಹೃದಯತೆ ಯಿಂದ ಮಾಡಿ, ಅವುಗಳಲ್ಲಿ ಉತ್ತಮವಾದುದನ್ನು ಪ್ರಕಟಿಸುವ ಹೊಣೆ ಯನ್ನು ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ವಿದ್ಯಾವರ್ಧಕ ಸಂಘ ಗಳಂತಹ ಸಂಸ್ಥೆಗಳು ಹೊರಬೇಕು. ಹಾದಿಬೀದಿಗೊಂದು ಪತ್ರಿಕೆಯಿದೆ ಯೆಂದು, ಕಳಿಸಿದುದೆಲ್ಲ ಅಚ್ಚಾಗುವುದೆಂದು ಲೇಖಕರು ತಾವು ಬರೆದುದೆಲ್ಲ ವನ್ನೂ ಅಚ್ಚಿಗೆ ಕಳಿಸುವುದು ವಿವೇಕವಲ್ಲ. ಲೇಖಕ ತನ್ನ ಕೃತಿಯನ್ನು ನಾಲ್ಕುದಿನ ಹತ್ತಿರವಿಟ್ಟುಕೊಂಡು, ತಾನೇ ಮತ್ತೆ ಮತ್ತೆ ಓದಿ ನೋಡಿ ತಿದ್ದಿ ಸೂಕ್ತ ಕಂಡಲ್ಲಿ ಅಚ್ಚಿಗೆ ಕಳಿಸಬಹುದು. ಬರೆದುದನ್ನು ಕೂಡಲೆ ಅಚ್ಚಿಗೆ

ತಳ್ಳುವ ಹವ್ಯಾಸದಿಂದ ಸಂಯಮುಸಡಲಿ, ಭಾವ, ವಿಚಾರ ಪುಟಗೊಳ್ಳಲ ವಕಾಶವಿಲ್ಲದಂತೆ ಆಗುತ್ತದೆ.

## ಅನುವಾದ

ಹೊಸ ಲೇಖಕರ ಶಕ್ತಿ ಇಂದು ಎರಡು ವಿಧದಲ್ಲಿ ದುರ್ವ್ಯಯು ವಾಗುತ್ತಿದೆ. ಅಚ್ಚಿನಾತುರದಲ್ಲಿ ಅವರು ಸ್ವತಂತ್ರವಾಗಿ ವಿಚಾರಮಾಡುವ ಶಕ್ತಿಯನ್ನು ನೀಗಿಕೊಂಡು ಅನುವಾದ ಯಂತ್ರಗಳಾಗುತ್ತಿದ್ದಾರೆ. ವ್ಯಕ್ತಿತ್ವವನ್ನು ಮರೆತು ಪರೋಪಜೀವಿಗಳಾಗುವುದೇ ಹೀನಾಯ. ಜನತೆಗೆ ದೊಡ್ಡವರ ಕೃತಿಗಳನ್ನು ಮನಸ್ಸುಬಂದಂತೆ ಅನುವಾದ ಮಾಡಿ ಮೂಲ ಕೃತಿಯನ್ನು ವಿರೂಪಗೊಳಿಸುವುದು ಸಾಹಿತ್ಯದ್ರೋಹ. ರವೀಂದ್ರ, ಟಾಲಸ್ಟಾಯ್, ಚೆಕಾಫ್, ಮೋಪಸಾ, ವಿಕ್ಟರ್‌ಹ್ಯೂಗೋ ಮೊದಲಾದ ಜಗದ್ವಿಖ್ಯಾತ ಲೇಖಕರ ಕೃತಿಗಳ ಕನ್ನಡ ಸ್ವರೂಪ ಯಾರಿಗೂ ಗೌರವ ತರುವಂತಿಲ್ಲ. ಗಾಂಧೀಜಿಯವರ ಕೃತಿಗಳ ಬಗ್ಗೆಯೂ ಈ ಮಾತು ಅನ್ವಯಿಸುತ್ತದೆ. ಅಪಕ್ವ ಅನುವಾದಗಳು ಗಾಂಧೀಜಿಯವರ ಅಭಿಪ್ರಾಯವನ್ನೇ ವಿಕೃತಮಾಡಿ ಅವರ ವಿಚಾರಧೋರಣೆಗೆ ವಿರುದ್ಧವಾದ ಭಾವನೆಗಳನ್ನು ವ್ಯಕ್ತಪಡಿಸಿವೆ. ಈ ವಿಚಾರದಲ್ಲಂತೂ ಕೆಲವು ಕನ್ನಡ ಪತ್ರಿಕೆಗಳ ಭಾಷಾಂತರ ಧೋರಣೆ ಅಕ್ಷಮ್ಯವಾಗಿದೆ.

ಸ್ವತಂತ್ರ ಲೇಖಕನಿಗಿಂತ ಅನುವಾದಕನ ಜವಾಬ್ದಾರಿ ಹೆಚ್ಚಿನದು. ಅವನು ಕೇವಲ ಭಾಷೆಗೆ ಪ್ರತಿಭಾಷೆ ಇಳಿಸುವ ಯಂತ್ರವಲ್ಲ. ಅನುವಾದಕನಲ್ಲಿ ಮೂಲಕೃತಿಕರ್ತನ ಬಗ್ಗೆ ವಿಶೇಷ ಗೌರವವಿರಬೇಕಾದುದು ಮಾತ್ರವಲ್ಲದೆ ಮೂಲಕೃತಿಕರ್ತನ ವಿಚಾರವೈಭವವನ್ನು ಅವನು ಚೆನ್ನಾಗಿ ಅರಿತಿರಬೇಕು. ಗಾಂಧೀಜಿಯವರ ಜೀವನ, ಸೇವೆ, ಇತರ ಕೃತಿಗಳು ಇವುಗಳ ಸಂಪೂರ್ಣ ಪರಿಚಯವಿದ್ದ ಹೊರತೂ ಅವರ ಕೃತಿಗಳನ್ನು ಅನುವಾದಿಸುವ ಕೆಲಸಕ್ಕೆ ಕೈಹಾಕುವುದು ಸಾಹಸದ ಮಾತು. ಜೊವೆಟ್ (ಪ್ಲೇಟೋಗಾಗಿ) ಆಮರ್ ಮೂಡ್ (ಟಾಲಸ್ಟಾಯ್‌ಗಾಗಿ) ನಿಕಲ್‌ಸನ್ (ಪರ್ಶಿಯಾ ಕವಿಗಳಿಗಾಗಿ) ಮಹಾದೇವದೇಸಾಯಿ (ಗಾಂಧೀಜಿಯವರ ಕೃತಿಗಳಿಗಾಗಿ) ಬಿ. ಎಂ. ಶ್ರೀ. (ಗ್ರೀಕ್ ನಾಟಕರಿಗಾಗಿ) ತಮ್ಮ ಪ್ರಿಯ ಲೇಖಕರು,

ಕವಿಗಳಿಗೆ ಜನ್ಮನಿವೇದನ ಮಾಡಿದ ಭಕ್ತಿ, ಶ್ರದ್ಧೆಯನ್ನು ಅನುವಾದಕರು ಜ್ಞಾಪಿಸಿಕೊಳ್ಳಬೇಕು,

ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಒಂದು ಕೃತಿಬರುವಾಗ ಅದು ತನ್ನ ಸೂಕ್ಷ್ಮತೆಯನ್ನು ಬಹುಮಟ್ಟಿಗೆ ಕಳೆದುಕೊಳ್ಳುವುದು ಅನಿವಾರ್ಯ. ಆದರೆ ಸೂಕ್ಷ್ಮಗ್ರಾಹಿಯೂ, ಸಿಷ್ಣಾತನೂ ಆದ ಅನುವಾದಕ ಮೂಲಕೃತಿಯ ಭಾವ, ರಸಗಳಿಗೆ ವಿಚಾರ ವೀಕ್ಷಣಗಳಿಗೆ ಅಪಮಾನ ವಾಗದಂತೆ ಎಚ್ಚರವಾಗಿರುತ್ತಾನೆ. ಸಂಸ್ಕೃತ ಮಹಾಕವಿಗಳ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿರುವ ಹಿರಿಯರು ಅದ್ಭುತ ಕಲಾಪಾಕಗಳನ್ನು ಸಾಧಿಸಿದರು. ಬಸಪ್ಪಶಾಸ್ತ್ರಿಗಳ 'ಶಾಕುಂತಲ', ರಾಮಶೇಷಶಾಸ್ತ್ರಿಗಳ 'ಮುದ್ರಾರಾಕ್ಷಸ ನಾಟಕ', ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳ 'ಮೇಘದೂತ' ನಮ್ಮ ಅನುವಾದಕರಿಗೆ ಮಾರ್ಗದರ್ಶಕಗಳಾಗಿವೆ.

ಕ್ರಿಯಾಶಕ್ತಿಯುಳ್ಳ ಲೇಖಕ ಅನುವಾದಗಳಿಗೆ ಕೈಯಿಕ್ಕಿದರೆ ಆತ್ಮಹತ್ಯ ಮಾಡಿಕೊಂಡಂತೆ. ಅನುವಾದ ಪ್ರವೃತ್ತಿ ಅವನನ್ನು ವ್ಯಾಪಿಸಿ ಅವನ ಕ್ರಿಯಾಚೇತನವನ್ನಡಗಿಸುತ್ತದೆ. ಹೊಸ ಲೇಖಕರು ಮೂರನೆಯ ದರ್ಜೆಯ ಸ್ವತಂತ್ರ ಕೃತಿಯನ್ನು ಬರೆದರೂ ಚಿಂತೆಯಿಲ್ಲ. ಅನುವಾದಗಳಿಗೆ ಕೈಯಿಕ್ಕದಿದ್ದರೆ ಸಾಕು.

ಭಾವನಾಪ್ರಧಾನವಾದ ಕೃತಿನಿರ್ಮಾಣದ ಜತೆಗೆ ವಿಚಾರಪ್ರಧಾನ ವಾದ ಕೃತಿನಿರ್ಮಾಣವನ್ನೂ ಲೇಖಕರು ಗಮನಿಸಬೇಕು. ಕನ್ನಡದಲ್ಲಿ ವೈಜ್ಞಾನಿಕ ಗ್ರಂಥಗಳು, ಶಾಸ್ತ್ರಗ್ರಂಥಗಳು, ಲಕ್ಷಣಗ್ರಂಥಗಳು ಬರ ಬೇಕಾಗಿವೆ. ಲೇಖಕ ತನಗೆ ಪ್ರಿಯವಾದ ವಿಷಯಗಳನ್ನಾಯ್ದುಕೊಂಡು ಅವುಗಳನ್ನು ಆಳವಾಗಿ ಅಭ್ಯಸಿಸಿ ತನ್ನ ಪಾಂಡಿತ್ಯಲಾಭವನ್ನು ನಾಡಿ ಗುಂಟು ಮಾಡಿಕೊಡಬೇಕು. ಕನ್ನಡದಲ್ಲಿ ಕವಿಗಳು, ಕತೆಗಾರರು, ಕಾದಂಬರಿ ಗಾರರು ಹೇಗೆ ಬೇಕೋ ಹಾಗೇ ಪಂಡಿತರು, ಶಾಸ್ತ್ರಜ್ಞರು, ಸಂಶೋಧಕರು, ಇತಿಹಾಸವೇತ್ತರು, ವೈಜ್ಞಾನಿಕರು ಬೇಕಾಗಿದ್ದಾರೆ.

## ಪ್ರಕಾಶಕರು

ಕನ್ನಡದಲ್ಲಿ ಪ್ರಕಾಶಕರ ಸಂಖ್ಯೆ ಬೆಳೆಯುತ್ತಿರುವುದೂ ಅವರು

ಹೆಚ್ಚು ಹೆಚ್ಚು ಪುಸ್ತಕಗಳನ್ನು ಪ್ರಕಟಿಸುತ್ತಿರುವುದೂ ಶುಭಚಿನ್ಹೆ. ಆದರೆ ವ್ಯಾವಹಾರಿಕವಾಗಿ ಪ್ರಕಾಶನವೃತ್ತಿ, ಇನ್ನೂ ಒಂದು ಮಟ್ಟಕ್ಕೆ ಬಂದಿಲ್ಲ.

ನೂರಾರು ಗ್ರಂಥಗಳನ್ನು ಪ್ರಕಟಿಸಿದ ಪ್ರಕಾಶಕರೂ ಲೇಖಕರ ಹಿತದ ಕಡೆಗೆ ಸಾಕಷ್ಟು ಲಕ್ಷ್ಯ ಕೊಡುತ್ತಿಲ್ಲ. ತಮ್ಮ ಶ್ರೇಯಸ್ಸಿನ ಬಹು ಭಾಗದ ಕೀರ್ತಿ ಲೇಖಕರಿಗೆ ಸಲ್ಲತಕ್ಕುದೆಂದು ಪ್ರಕಾಶಕರು ತಿಳಿಯಬೇಕು. ಪ್ರಕಟನೆಯಲ್ಲಿ ಅಭಿರುಚಿ, ಸಂಸ್ಕೃತಿ ವ್ಯಕ್ತವಾಗಬೇಕು. ವಿಕ್ಟರ್ ಗಾಲೆನ್ಜ್‌ನಂತಹ ಪ್ರಕಾಶಕ ದೇಶದ ಒಂದು ಗಣ್ಯವ್ಯಕ್ತಿ. ಪ್ರಕಾಶಕರು ತಮ್ಮ ಸೇವೆಯಿಂದ ಅಂತಹ ಸ್ಥಾನವನ್ನು ದೊರಕಿಸಿಕೊಳ್ಳಬೇಕು. ಪಕ್ಷಾಭಿಮಾನವನ್ನತಿಕ್ರಮಿಸಿ ಉತ್ತಮ ಸಾಹಿತ್ಯಕ್ಕೆ ಪ್ರಕಾಶಕರು ಬೆಲೆ ಕೊಡಬೇಕು. ಪುಸ್ತಕಗಳನ್ನು ಅಚ್ಚುಮಾಡಿ ಕುಳಿತರೆ ತಮ್ಮ ಕೆಲಸ ವಾಯಿತೆಂದು ಪ್ರಕಾಶಕರು ಭಾವಿಸುತ್ತಾರೆ. ಪ್ರಕಟನೆ, ವಿಮರ್ಶೆಗಳು ಅನಗತ್ಯವೆಂಬ ಭಾವನೆಯೂ ಕೆಲವರಿಗಿದೆ. ಹೀಗಾಗಿ ಕರ್ನಾಟಕದಲ್ಲಿ ಒಂದೆಡೆ ಪ್ರಕಟವಾಗುವ ಪುಸ್ತಕ ಇನ್ನೊಂದೆಡೆ ಹಾಯುವುದಿಲ್ಲ. ಒಂದು ಸಾವಿರ ಪ್ರತಿ ಮಾರಾಟವಾಗಬೇಕಾದರೆ ಹತ್ತುವರ್ಷಕಾಲ ಬೇಕಾಗುತ್ತಿತ್ತು. ಈಗ ಪರಿಸ್ಥಿತಿ ಸ್ವಲ್ಪ ಸುಧಾರಿಸಿದೆ. ವ್ಯವಹಾರ ದೃಷ್ಟಿಯಿಂದಲೇ ಆದರೂ ಉತ್ತಮ ಗ್ರಂಥಗಳನ್ನು ಪ್ರಕಟಿಸಿ ಅವನ್ನು ಸರಿಯಾಗಿ ಹಂಚುವ ವ್ಯವಸ್ಥೆಮಾಡುವುದೊಳ್ಳೆಯದು. ಇದೂ ಕನ್ನಡ ಸೇವೆಯೇ.

## ಪುಸ್ತಕ ವ್ಯಾಪಾರ

ಕನ್ನಡದಲ್ಲಿ ಹೆಚ್ಚು ಮಂದಿ ಪ್ರಕಾಶಕರು ಪುಸ್ತಕವ್ಯಾಪಾರಿಗಳೂ ಆಗಿದ್ದಾರೆ. ಆದರೆ ಅವರಲ್ಲಿ ಒಮ್ಮತಿ ಸಮ್ಮತಿಯಿಲ್ಲ. ಹತ್ತುರೂಪಾಯಿಯ ಪುಸ್ತಕ ಕೊಳ್ಳಬೇಕಾದರೆ ಹತ್ತು ಅಂಗಡಿ ಸುತ್ತಬೇಕು. ಕೆಲವು ಪುಸ್ತಕ ವ್ಯಾಪಾರಿಗಳಲ್ಲಿ ಕೆಲಕೆಲವು ಗ್ರಂಥಕರ್ತರ ಕೃತಿಗಳು ದೊರೆಯುವುದಿಲ್ಲ. ಕರ್ನಾಟಕ ಸಂಘಗಳು ನಡೆಸುವ ಪುಸ್ತಕಾಲಯಗಳಲ್ಲಿ ಈ ವೃತ್ತಿವೈಷಮ್ಯ ಅತಿರೇಕಕ್ಕೇರಿದೆ. ಪ್ರಕಾಶಕರು, ಪುಸ್ತಕ ವ್ಯಾಪಾರಿಗಳು ಆಗಾಗ್ಗೆ ಸೇರಿ ತಮ್ಮ ವ್ಯವಹಾರದ ಕೌಲು ಕರಾರುಗಳನ್ನು ಖಚಿತಮಾಡಿಕೊಳ್ಳುವುದೊಳ್ಳೆಯದು. ಸ್ಮಿತ್ ಅಥವಾ ಫಾಯಲ್‌ಗೆ ಬರೆದರೆ ಜಗತ್ತಿನಲ್ಲಿ ಪ್ರಕಟಿ

ವಾಗುವ ಯಾವ ಪುಸ್ತಕ ಬೇಕಾದರೂ ಸಿಕ್ಕುತ್ತದೆ. ಅಂತಹ ವ್ಯವ ಸಿಸ್ತು ನಮ್ಮ ಪುಸ್ತಕ ವ್ಯಾಪಾರಿಗಳಲ್ಲಿಯೂ ಬೆಳೆಯಬೇಕು.

### ಲೇಖಕರ ಹಿತ

ಕನ್ನಡದಲ್ಲಿ ಪುಸ್ತಕಗಳ ಬೆಲೆ ದಿನ ದಿನಕ್ಕೆ ಏರುತ್ತ ಹೋಗುತ್ತಿದೆ ಅಚ್ಚಾದಾಗ ಇದ್ದ ಪುಸ್ತಕದ ಬೆಲೆ ಪ್ರತಿಗಳು ತೀರುತ್ತ ತೀರುತ್ತ ಏ ತ್ತದೆ. ಅಖಿಲ ಕರ್ನಾಟಕದ ಎಲ್ಲ ಪುಸ್ತಕ ವ್ಯಾಪಾರಿಗಳಿಗನ್ವಯಿಸು ಕೆಲವು ವ್ಯವಹಾರ ಸೂತ್ರಗಳನ್ನಿಟ್ಟುಕೊಂಡು ಪುಸ್ತಕ ವ್ಯಾಪಾರಿಗ ವರ್ತಿಸಬೇಕು. ಪರಪ್ರಾಂತೀಯ ಲೇಖಕರ ಕೃತಿಗಳನ್ನು ಅಪ್ಪ ದೊರಕಿಸಿಕೊಳ್ಳದೆ, ಲೇಖಕರಿಗಾಗಲಿ ಅವರ ವಂಶೀಯರಿಗಾಗಲಿ ಸ ಬೇಕಾದ ಗೌರವಧನ ಸಲ್ಲಿಸದೆ ಪ್ರಕಟಿಸುತ್ತಿರುವುದು ನಾಚಿಗೆಗೇಡು ಸಾಹಿತ್ಯರಂಗದಲ್ಲಿ ನಡೆಯುತ್ತಿರುವ ಈ ಹಗಲುದರೋಡೆ ಕನ್ನಡನಾಡಿ ಗೌರವ ತರುವಂತಿಲ್ಲ.

ಓದುಗರ ಸಂಖ್ಯೆ ಈ ಮೂರು ವರ್ಷಗಳಲ್ಲಿ ಕಾಲಸ್ಥಿತಿಯಿಂದ ಹತ್ತ ಪಟ್ಟು ಏರಿದೆ. ಕನ್ನಡ ಪುಸ್ತಕಗಳನ್ನು ಕೊಂಡು ಓದುವ ಅಭ್ಯಾ ಬೆಳೆಯುತ್ತಿದೆ. ಓದುಗರು ಪ್ರಕಾಶಗರಿಗಿಂತಲೂ ಚಾಣಾಕ್ಷರಾಗಿದ್ದಾ ಹಲವು ಸಲ ಅವರು ಪುಸ್ತಕವನ್ನು ಬೇರೆಲ್ಲಿಯಾದರೂ ದೊರಕಿಸಿ ಓ ಅನಂತರ ಕೊಳ್ಳುವುದೂ ಉಂಟು. ಕನ್ನಡನಾಡಿನ ಪ್ರಜಾ ಸಂಖ್ಯೆ ಪ್ರಮಾಣದಲ್ಲಿ ಓದುಗರ ಸಂಖ್ಯೆ ಸಾಲದು. ಪ್ರಕಟವಾದ ಒಂದು ಪು ಕದ ೫,೦೦೦ ಪ್ರತಿಗಳಾದರೂ ಮೊದಲನೆಯ ಮುದ್ರಣದಲ್ಲಿ ಖರ್ಚಾ ದಿದ್ದರೆ ಸಾಹಿತ್ಯ ಪ್ರಸಾರ ಸಾಕಷ್ಟು ಆಗುವುದಿಲ್ಲ.

ಕನ್ನಡ ನಾಡಿನಲ್ಲಿ ಲೇಖನ ವೃತ್ತಿಯನ್ನು ಅವಲಂಬಿಸಿ ಯಾ ಬರೆಹಗಾರನೂ ಬದುಕಲು ಸಾಧ್ಯವಿಲ್ಲ. ಲೇಖಕರ ಕಷ್ಟಸುಖಗ ಜನತೆಗೂ ಬೇಡ, ಸರ್ಕಾರಕ್ಕೂ ಬೇಡ. ನಾಡಿನ ಹಲವೆಡೆಗಳಲ್ಲಿರು ರಾಜಾಸ್ಥಾನಗಳಿಗೂ ಬೇಡವಾಗಿದೆ. ಒಂದು ಕಾಲದಲ್ಲಿ ಸಾಹಿ ಪ್ರೋತ್ಸಾಹ ಅರಸರಿಗೆ ಸೇರಿತ್ತು. ಅಕ್ಷರಕ್ಕೆ ಲಕ್ಷವರಹ ಕೊಡುವ ಪ್ರ ಗಳೂ, ಕವಿಗಳಿಗೆ ದಾನ, ದತ್ತಿ, ಜಹಾಗೀರಿ ಕೊಡುವ ಅರಸರ ಸಾಹಿತ್ಯವನ್ನು ಪೋಷಿಸಿದರು. ಇಂದು ಆ ಕಾರ್ಯಭಾಗ ಜನತೆ

ಮೇಲೆ ಬಿದ್ದಿದೆ. **ಯಾವ ನಾಡಿನಲ್ಲಿ ಅದರ ಸಾಹಿತಿಗಳು, ಕಲಾವಿದರಿಗೆ ಪ್ರೋತ್ಸಾಹವಿಲ್ಲವೋ ಅದು ಸಹರಾ ಮರುಭೂಮಿಗಿಂತ ಬರಡು.**

ಪ್ರತಿಭಾಶಾಲಿಗಳಾದ ಲೇಖಕರನ್ನು ಪೋಷಿಸುವುದಕ್ಕೂ ಹಾಗೂ ಅಕಾಲ ಮರಣಕ್ಕೆ ತುತ್ತಾದ ಲೇಖಕರ ಸಂಸಾರ ಭಿಕ್ಷಾಟನೆಗೆ ಹೋಗದಂತೆ ಮಾಡುವುದಕ್ಕೂ ಒಂದು 'ಲೇಖಕರ ಆಪದ್ಧನ'ವಿರಬೇಕು. ಕನ್ನಡ ಸಾಹಿತ್ಯ ಪರಿಷತ್ತು, ವಿದ್ಯಾವರ್ಧಕ ಸಂಘಗಳಂತಹ ಸಂಸ್ಥೆಗಳು ಈ ಕೆಲಸಕ್ಕೆ ಮನಸ್ಸು ಕೊಡಬೇಕು

ಕನ್ನಡದಲ್ಲಿ ಆಗಿರುವ ಕೆಲಸ ತೀರ ಸ್ವಲ್ಪ, ಆಗಬೇಕಾದ ಕೆಲಸ ಅಗಾಧ. ನಮ್ಮ ಸಾಹಿತ್ಯ ಸಂಸ್ಥೆಗಳು ತೋರುತ್ತಿರುವ ಆಲಸ್ಯದಲ್ಲಿ ಇಂತಹ ಕೆಲಸ ಎಂದಾಗುವುದೋ ಹೇಳಲಿಕ್ಕೆ ಬಾರದು. ಪ್ರಕಾಶಕರು ಒಂದು ಮಿತಿಯೊಳಗೆ ಕೆಲಸಮಾಡತಕ್ಕವರು. ಸಂಸ್ಥೆಗಳ ಜನಬಲವಾಗಲಿ ಧನ ಬಲವಾಗಲಿ ಅವರಿಗಿಲ್ಲ. ದೊಡ್ಡ ನಿಯೋಜನೆಯನ್ನು ಕೈಗೊಳ್ಳುವುದು ಸಾಹಿತ್ಯ ಸಂಸ್ಥೆಗಳಿಗೆ ಮಾತ್ರ ಶಕ್ಯ. ಪರಿಷತ್ತು, ವಿದ್ಯಾವರ್ಧಕ ಸಂಘಗಳು ಅತ್ಯವಶ್ಯಕವಾಗಿ ಕೈಗೊಳ್ಳಬೇಕಾದ ಕಾರ್ಯವಿಧಾನವನ್ನಿಲ್ಲಿ ಸೂಚಿಸಬಹುದು :

೧. ಕಾವ್ಯ ಪ್ರಕಟನೆ: ಹಿಂದೆ ಪ್ರಕಟವಾದ ಕನ್ನಡ ಕಾವ್ಯಗಳು ಇಂದು ಉಪಲಬ್ಧವಿಲ್ಲ. ಪಂಪ, ರನ್ನ, ಜನ್ನ, ಹರಿಹರ, ರಾಘವಾಂಕ, ರತ್ನಾಕರವರ್ಣಿ, ಕುಮಾರವ್ಯಾಸರಂತಹ ಹಿರಿಯ ಕವಿಗಳ ಕೃತಿಗಳು ಕೂಡ ದೊರೆಯುವುದಿಲ್ಲ. ಕನ್ನಡದ ಮಹಾಕಾವ್ಯಗಳೆಲ್ಲಾ ಅಚ್ಚಾಗಿ ಓದುಗರ ಕೈ ಸೇರಬೇಕು.

೨. ಒಮ್ಮೆಯೂ ಅಚ್ಚಾಗದೆ ಹಲವು ಕಾವ್ಯಗಳು ಓರಿಯಂಟಲ್ ಲೈಬ್ರರಿ, ಮಠಗಳ ಪುಸ್ತಕ ಭಂಡಾರಗಳಲ್ಲಿ ಕೊಳೆಯುತ್ತ ಬಿದ್ದಿವೆ. ಕನ್ನಡದ ಯಾವದೇ ಪ್ರಾಚೀನ ಗ್ರಂಥವಾಗಲೀ ಒಮ್ಮೆಯಾದರೂ ಅಚ್ಚಾಗಬೇಕು.

೩. ಸಂಗ್ರಹಗಳು :—ಮೈಸೂರು ವಿಶ್ವವಿದ್ಯಾನಿಲಯದವರು ಕೆಲವು ಕಾವ್ಯ ಸಂಗ್ರಹಗಳನ್ನು ಹೊರಡಿಸಿದರು. ಸಂಗ್ರಹಕ್ಕೆ ಒದಗುವ ಹಾಗೂ

ಸಂಗ್ರಹಯೋಗ್ಯವಾದ ನೂರಾರು ಕನ್ನಡ ಕಾವ್ಯಗಳಿವೆ. ಅವೆಲ್ಲದರ ಸಂಗ್ರಹ ಪ್ರಕಟವಾಗಬೇಕು.

೪. ಲಕ್ಷಣ ಗ್ರಂಥಗಳು:— ರಸಶಾಸ್ತ್ರ, ಅಲಂಕಾರ, ಲಕ್ಷಣಗಳ ಮೇಲೆ ಕನ್ನಡದಲ್ಲಿ ದೊರೆಯುವ ಗ್ರಂಥಗಳೂ ಪ್ರಕಟವಾಗಿಲ್ಲ. ಇವುಗಳ ಜತೆಗೆ ಸಂಸ್ಕೃತ, ಇಂಗ್ಲಿಷ್, ಫ್ರೆಂಚ್, ಗ್ರೀಕ್ ಮತ್ತಿತರ ಭಾಷೆಗಳಲ್ಲಿ ದೊರೆಯುವ ಲಕ್ಷಣ ಗ್ರಂಥಗಳೂ ಕನ್ನಡಿಗರಿಗೆ ದೊರೆಯಬೇಕು.

೫. ಆಧುನಿಕ ಸಾಹಿತ್ಯಾವಲೋಕನಕ್ಕೆ ಅವಶ್ಯಕವಾದ ಶಾಸ್ತ್ರ ಗ್ರಂಥಗಳೂ ತಂತ್ರ ಗ್ರಂಥಗಳೂ ಪ್ರಕಟವಾಗಬೇಕು.

೬. ಕನ್ನಡ ನಾಡಿನ ಸಂಸ್ಕೃತಿಯನ್ನು ಕುರಿತ ಗ್ರಂಥಗಳು ಕನ್ನಡ, ಇಂಗ್ಲಿಷ್, ಹಿಂದಿ ಮತ್ತಿತರ ಭಾಷೆಗಳಲ್ಲಿ ಪ್ರಕಟವಾಗಬೇಕು.

೭. ಜನಪದ ಸಾಹಿತ್ಯ ಸಂಗ್ರಹ ಕೆಲಸವನ್ನು ಕೆಲವರು ಮಾಡಿ ಪ್ರಕಟಿಸಿದ್ದಾರೆ. ಇಂತಹ ನೂರಾರು ಗ್ರಂಥಗಳನ್ನು ಪ್ರಕಟಿಸುವಷ್ಟು ವಸ್ತು ಕನ್ನಡ ನಾಡಿನಲ್ಲಿದೆ. ಜನಪದ ಸಾಹಿತ್ಯ ಸಂಗ್ರಹಕ್ಕೆ ತಜ್ಞರಾದವರನ ನಿಯಮಿಸಿ, ದೊರೆಯುವ ಸಾಹಿತ್ಯವನ್ನು ಸಂಸ್ಕರಿಸಿ ಪ್ರಕಟಿಸಬೇಕು.

೮. ಕನ್ನಡದ ಉತ್ತಮ ಗ್ರಂಥಗಳ ಅನುವಾದ ಇಂಗ್ಲಿಷ್, ಹಿಂದೀ, ತಮಿಳು ಮೊದಲಾದ ಭಾಷೆಗಳಲ್ಲಿ ಪ್ರಕಟವಾಗಬೇಕು. ಇದರಿಂದ ಕನ್ನಡಿಗರ ಹಿರಿಮೆ ಇತರರಿಗೂ ಅರಿತವಾಗುತ್ತದೆ.

## ನಾಡಿನ ಭವಿಷ್ಯ

ಸಾಹಿತ್ಯ ಪ್ರಗತಿ ಗಗನಕುಸುಮವಲ್ಲ. ಅದು ದೇಶದ ಪರಿಸ್ಥಿತಿಯನ್ನು ಬಹುಮಟ್ಟಿಗೆ ಅವಲಂಬಿಸಿದೆ. ಇಂದು ಕನ್ನಡ ನಾಡಿನ ಹೆಗಲ ಮೇಲೆ ಎರಡು ನೊಗಗಳು ಕುಳಿತಿವೆ. ಒಂದು—ಅಖಿಲ ಭಾರತವನ್ನು ತನ್ನ ವಜ ಮುಷ್ಟಿಯಲ್ಲಿ ಹಿಡಿದಿರುವ ಸಾರ್ವಭೌಮ ಸರ್ಕಾರ; ಎರಡು—ಐತಿಹಾಸಿಕ ಚಮತ್ಕಾರದಿಂ. ಕನ್ನಡ ನಾಡನ್ನು ಹಂಚಿಕೊಂಡಿರುವ ಮುಂಬಯಿ ಮದರಾಸು, ಹೈದರಾಬಾದು, ಉತ್ತರ ಕರ್ನಾಟಕ ಸಂಸ್ಥಾನಗಳ ಸರ್ಕಾರಗಳು. ಇವರ ಪ್ರಭಾವದಿಂದ ಕನ್ನಡದ ಎಲ್ಲೆ ದಿನದಿನಕ್ಕೆ ಸಂಕುಚಿತವಾಗುತ್ತಿದೆ. ಕನ್ನಡದ ಸೊಲ್ಲು ಗಡಿಯಲ್ಲಿ ಅಡಗುತ್ತಿದೆ. **ಕನ್ನಡ ಸಾಹಿತ್ಯೋದ್ಧಾರವಾಗಬೇಕಾದರೆ ಕನ್ನಡ ಪ್ರಾಂತ್ಯವನ್ನು ಸಾಧಿಸಿದ ಹೊರತೂ**

**ಗತ್ಯಂತರವಿಲ್ಲ.** ಅದರ ಉಪಷ್ಟಂಭಕಗಳಾಗಿ ಕನ್ನಡ ವಿಶ್ವವಿದ್ಯಾನಿಲಯ, ಕನ್ನಡ ವಿಸರಣಾಲಯ (Broadcasting Station) ಸ್ಥಾಪನೆಯಾಗಬೇಕು. ನೆಹರೂ ಅವರಂತಹ ಸುಮುದರ್ಶಿಗಳ ಸರ್ಕಾರದಿಂದ ಕರ್ನಾಟಕದ ಹಿತ ಹಿಂದೆ ಬೀಳುವುದಿಲ್ಲವೆಂದು ನಿರೀಕ್ಷಿಸಬಹುದು. ಪ್ರಾಂತ್ಯರಚನೆಗೆ ಇರುವ ಅಡ್ಡಿ ಆತಂಕಗಳನ್ನೆದುರಿಸಿ, ಗುರಿ ಸುಸೂತ್ರವಾಗಿ ಮುಟ್ಟಲು ಬೇಕಾದ ವಾತಾವರಣವನ್ನು ಈಗಿನಿಂದ ಕಲ್ಪಿಸಬೇಕು. ಇದರಲ್ಲಿ ಸಾಹಿತಿಗಳ ಜವಾಬ್ದಾರಿ ಹಿರಿದು. ಸಾಹಿತಿಗಳೂ ಜನನಾಯಕರಾಗಿದ್ದಾರೆ. ಈ ವಿಷಯದಲ್ಲಿ ಜನತೆಯಲ್ಲಿ ಜಾಗೃತಿಯನ್ನುಂಟುಮಾಡಿ ಅವರು ಏಕಕಂಠರಾಗಿ ಪ್ರಾಂತ್ಯಬೇಕೆನ್ನುವಂತೆ ಮಾಡಬೇಕಾದುದು ಸಾಹಿತಿಗಳ ಕರ್ತವ್ಯ. ಗಡಿನಾಡಿನಲ್ಲಿ ಪರಪ್ರಾಂತೀಯರು ನೇರಿಕೊಂಡು, ಕನ್ನಡದ ಕೆಲವು ಮನೆಮುರುಕರ ಬೆಂಬಲದಿಂದ ಕನ್ನಡದಮೇಲೆ ಗದಾಪ್ರಹಾರ ಮಾಡುತ್ತಿದ್ದಾರೆ. ಈ ಪರಿಸ್ಥಿತಿಗೆ ನಮ್ಮ ಜನರ ಆಲಸ್ಯವೇ ಕಾರಣ. ಕನ್ನಡ ಜನದ ರಕ್ತದಲ್ಲಿ ಬೆರತಿರುವ ಆಲಸ್ಯವಿಷಯುವನ್ನು ನಿವಾರಿಸುವ ಕೆಲಸ ಸಾಹಿತಿಗಳಿಗೂ ಸೇರಿದೆ.

ಕನ್ನಡದ ಸಂಸ್ಥೆಗಳು ಮಾಡಬೇಕಾದ ಕೆಲಸ ಮೂಟೆಗಟ್ಟಳೆ ಕುಳಿತಿದೆ. ಧಾರವಾಡ, ಬೆಂಗಳೂರು ಸಾಹಿತ್ಯ ಸಂಸ್ಥೆಗಳಲ್ಲಿ ಯಾವದು ಕೇಂದ್ರವೆಂಬುದನ್ನು ನಿರ್ಧರಿಸಲು ತೋರಿಸಿದ ಆಸಕ್ತಿಯಲ್ಲಿ ಒಂದು ಭಾಗ ಕನ್ನಡ ಕೆಲಸಕ್ಕೆ ವಿನಿಯೋಗಿಸಿದ್ದರೆ ನಾಡಿನ ಪರಿಸ್ಥಿತಿ ಬದಲಾಗುತ್ತಿತ್ತು. ಜನರ ಶಕ್ತಿ, ದೃಷ್ಟಿ, ಉತ್ಸಾಹ ನಿರರ್ಥಕ ಕನ್ನಡ ಸಂಸ್ಕೃತವಾದ, ನ, ಣ ನ್ಯಾಜ್ಯ, ಬಿರುದುಬಾವಲಿ ಪಡೆದವರಿಗೆ ಸತ್ಕಾರ ಕೂಟಗಳಿಗಾಗಿ ವ್ಯಯವಾಗುತ್ತಿದೆ. ಕನ್ನಡದ ಗ್ರಂಥರಚನೆಯ ಪ್ರಗತಿಯನ್ನು ಸೂಚಿಸುವ ವಾರ್ಷಿಕ ವರದಿಗಳು ಕೂಡ ಈ ಸಂಸ್ಥೆಗಳಿಂದ ಪ್ರಕಟವಾಗುತ್ತಿಲ್ಲ. ಕೆಲಸಮಾಡದೆ ಅಧಿಕಾರ ಸ್ಥಾನಗಳಲ್ಲಿರಬೇಕೆಂಬ ಮನೋಭಾವ ನಮ್ಮ ಜನರಲ್ಲಿ ಹೋಗಬೇಕು. ಪುಣ್ಯಾತ್ಮರು ತಮ್ಮ ತ್ಯಾಗ, ಸೇವೆ, ದಕ್ಷತೆಗಳಿಂದ 'ಇಂಡಿಯನ್ ನ್ಯಾಷನಲ್ ಕಾಂಗ್ರೆಸ್' ಸಂಸ್ಥೆಯನ್ನು ಹೇಗೆ ಕಟ್ಟಿದರೋ ಹಾಗೆ ನಮ್ಮ ಜನ ಕನ್ನಡ ಸಂಸ್ಥೆಗಳನ್ನು ಕಟ್ಟಬೇಕು.

ಇದಕ್ಕೆ ನಮ್ಮ ಜನರ ಮನೋಭಾವದಲ್ಲಿಯೇ ಮಹತ್ವದ ಕ್ರಾಂತಿಯಾಗಬೇಕು. ನಾವು ಬ್ರಾಹ್ಮಣರು—ನಾವು ಲಿಂಗಾಯತರು—ನಾವು ಮುಸಲ್ಮಾನರು ಎಂದು ಭಾವಿಸಿ ನಮ್ಮ ನಮ್ಮ ಕೋಮಿನ ಉತ್ಕರ್ಷಕ್ಕಷ್ಟೇ ಹೊಡೆದಾಡುವ ಕಾಲ ಹೋಯಿತು. ಸಾಂಘಿಕಜೀವನ ಬೆಳೆಯುತ್ತಿರುವಾಗ, ವಿಶ್ವಕುಟುಂಬ ಭಾವನೆ ಸಹಜವೇಗದಿಂದ ಪಸರಿಸುತ್ತಿರುವಾಗ ಒಂದು ಸಮಾಜ, ಒಂದು ಕೋಮು, ಒಂದು ಮತವೆಂದು ಹೋರಾಡುವುದು ಮೂರ್ಖತನದ ಲಕ್ಷಣ. ಇಂತಹ ಕಲಹಯೆಬ್ಬಿಸುವವರು ನಿಜವಾಗಿಯೂ ತಮ್ಮ ಕೋಮಿನ ಹಿತಚಿಂತಕರಲ್ಲ. ಕೋಮಿನ ನೆಪದಲ್ಲಿ ಅವರು ತಮ್ಮ ಸ್ವಾರ್ಥ ಸಾಧಿಸುತ್ತಾರೆ. ಅವರ ಹೋರಾಟದಿಂದ ಕೋಮಿನವರಿಗೆ ಪರಮ ಹಾನಿಯಾಗುತ್ತದೆ. ಹಾಗೂ ಪರಕೋಮಿನವರ ರಕ್ತದೃಷ್ಟಿ ಬೆಳೆಯುತ್ತದೆ. **ನಮ್ಮ ಧರ್ಮ— ನೀತಿ— ಮತ— ಸಾಹಿತ್ಯ— ರಾಜಕಾರಣ ಎಲ್ಲಾ ಕನ್ನಡಮಯವಾಗಬೇಕು.** ಎಂದು ಕನ್ನಡದ ಪೂರ್ಣಕಳೆಯನ್ನು ನಾವು ಕಾಣುತ್ತೇವೆಯೋ ಅಂದು ವಿಶ್ವದ ಹಾಗೂ ವಿಶ್ವೇಶ್ವರನ ಸಾಕ್ಷಾತ್ಕಾರ ಪಡೆಯುತ್ತೇವೆ.

ಇಂದು, ನಮ್ಮ ಚೈತನ್ಯವನ್ನು ನಮ್ಮ ನಮ್ಮಲ್ಲಿ ಬಡಿದಾಡುವುದಕ್ಕೆ ವಿನಿಯೋಗಿಸುವುದರ ಬದಲು ದೊಡ್ಡ ಭೂತಗಳನ್ನು ಕೆಡವಲು ಉಪಯೋಗಿಸಬೇಕಾಗಿದೆ. ಯುದ್ಧದ ದೆಸೆಯಿಂದ ಪುಷ್ಟಿಗೊಂಡು ನಿಂತಿರುವ 'ಬಂಡವಾಳಶಾಹಿ' ಬೃಹದಾಕಾರ ತಾಳುತ್ತಿದೆ. ಇಂದು ವಾಮನನ ಹಾಗೆ ಕಾಣುವ ಈ ರಾಕ್ಷಸ ನಾಳೆ ಅಟ್ಲಾಸ್ ಆಗುತ್ತಾನೆ. ನಮ್ಮ ಹಿತ, ಸುಖ, ಆರೋಗ್ಯ, ವಿದ್ಯೆ, ವಿವೇಕಗಳೆಲ್ಲಾ ಅವನ ಲೀಲಾವಿಲಾಸದ ದಾಸಿಗಳಾಗುತ್ತವೆ. 'ಸರ್ವೇಜನೋ ಸುಖಿನೋ ಭವಂತು' ಎಂಬ ತತ್ವವನ್ನು ನಿತ್ಯ ಪಠಿಸುವ ಸಾಹಿತಿಗಳು ಸರ್ವಜನ ಸುಖಾಕಾಂಕ್ಷಿಗಳಾದರೆ ಬಂಡವಾಳ ಭೂತವನ್ನೆದುರಿಸಬೇಕು. ಫಾಸಿಸಂ, ಇಂಪೀರಿಯಲಿಸಂ, ಕಮ್ಯೂನಿಸಂ ಎಲ್ಲಾ ಹೇಗೆ ಒಂದೊಂದು ದೇಶದ ಸ್ವಾತಂತ್ರ್ಯವನ್ನು ನುಂಗಿವೆಯೋ ಹಾಗೆ ಬಂಡವಾಳಶಾಹಿ ನಮ್ಮ ದೇಶವನ್ನು ನುಂಗುತ್ತಿದೆ. ಪ್ರಜಾಸ್ವಾಮ್ಯ, ಬಂಡವಾಳಸ್ವಾಮ್ಯಗಳೆಂಬ ಎರಡು ಪಕ್ಷಗಳು ಜಗತ್ತಿನಲ್ಲೆಲ್ಲಾ ಉದಯಿಸುತ್ತಿವೆ. ಇವೇ ಎರಡು ಜಾತಿಗಳು.

ಇವುಗಳ ಮುಂದೆ ಉಳಿದವು ಗೌಣ. ಸಾಹಿತಿ, ತಾನು ಯಾವ ಜಾತಿ
ಯುವನೆಂದು ನಿರ್ಧರಿಸಿಕೊಳ್ಳಬೇಕು. ಬಂಡವಾಳಶಾಹಿಯ ಮುಂಗಮುಷ್ಟಿಗೆ
ಸಿಕ್ಕಿ ನರಳುತ್ತಿರುವ ಅಮೆರಿಕಾಕ್ಕೆ ಕಾರ್ಲ್ ರೇಡಕ್ಕರು ಇವೇ
ಮಾತುಗಳನ್ನು ಹೇಳುತ್ತಿದ್ದಾರೆ.* ಬಂಡವಾಳಶಾಹಿ ಸಾಮ್ರಾಜ್ಯ ಬೆಳೆಯು
ವಂತೆ ಈಗಲೇ ಕನ್ನಡ ನಾಡಿನ ಸಾಹಿತಿಗಳು, ಇತರರು ಎಚ್ಚರರಾಗಿದ್ದು
ಜಗತ್ತಿಗೇ ಒಂದು ಮೇಲ್ಪಂಕ್ತಿ ಹಾಕಿಕೊಡಬಹುದು.

ಲೋಕದಲ್ಲಿ ಮನುಷ್ಯನಾಗಿ ಹುಟ್ಟುವುದು ಭಾಗ್ಯವಾದರೆ ಸಾಹಿತಿ
ಯಾಗುವುದು, ಕಲಾವಿದನಾಗುವುದು ಹಿರಿಯ ಭಾಗ್ಯ. 'ರೈಟ್ಸ್ ಆಫ್
ಮ್ಯಾನ್'—'ದಸ್ ಸ್ಪೇಕ್ ಜಾರತುಸ್ತ್ರ'—'ಸೋಷಿಯಲ್ ಕಾಂಟ್ರ್ಯಾಕ್ಟ್'
ವಂತಹ ಒಂದೊಂದು ಗ್ರಂಥ ಆಯಾ ದೇಶದ ಚರಿತ್ರೆಯನ್ನೇ ರೂಪಿಸಿವೆ.
ಸಾಹಿತ್ಯ ವಿಲಾಸದ ಸಾಧನವಲ್ಲ. ದೇಶೋದ್ಧಾರಕ್ಕೆ ಆತ್ಮೋದ್ಧಾರಕ್ಕೆ
ಸಾಧನವಾಗುವ ಗಾಯಿತ್ರಿಯದು.) ಸಾಹಿತಿ ತನ್ನ ಸುಪ್ತಚೇತನದ
ಶಿರಿವನ್ನುಂಟುಮಾಡಿಕೊಂಡು, ಅದರ ಸಂಪೂರ್ಣ ಪ್ರಯೋಜನವನ್ನು ತನ್ನ

---

* "A modern artist who does not want to be the singer of exploitation, the singer of burning books, the singer of public execution of the best sons of the people, an artist who does not wish to be the bard of the senseless all-destroying new imperialist war, must leave the plague infested shores for new shores where a new life is blossoming forth

And he who wishes that literature should again develop, he who wishes that a precious literature should exist, he who wishes that the great lever of the development of mankind which gave mankind the greatest joy, which fills the life of many people, which is the source of great creativeness, should live and develop, must leave that shore, seek for new ways towards us, must go with the proletariat into the struggle will there emerge, develop and become strong the literature that will be a great literature."

Karl Radek in *American Writers' Congress.*

ನಾಡವರಿಗೆ ಮಾಡಿಕೊಡಬೇಕು. ಅವನ ಕ್ರಾಂತಿಖಡ್ಗಕ್ಕೆ * ಲೋಕದ ತಾಮಸ ಕಳೆಗಳು ನಡುಗಬೇಕು. ಅದು ದುರ್ಬಲರ, ದಲಿತರ, ಬಡವರ ರಕ್ಷಾಕವಚವಾಗಬೇಕು. ಆಗಲೇ ಸಾಹಿತ್ಯದ ಸಾರ್ಥಕ್ಯ-ಸಾಹಿತಿಯ ಜನ್ಮ ಸಾಫಲ್ಯ.

ನಮ್ಮ ನಾಡು ಹಾಗೂ ಸಾಹಿತ್ಯದ ಸದ್ಯದ ಸ್ಥಿತಿಗೆ ನಮ್ಮ ಅಲ್ಪ ತೃಪ್ತಿಯೇ ಕಾರಣ. ಸೋದರ ಪ್ರಾಂತ್ಯಗಳ ಪ್ರಚಲಿತ ಸಾಹಿತ್ಯವನ್ನು ನೋಡಿಕೊಂಡು ಅದಕ್ಕಿಂತ ನಮ್ಮದು ಮೇಲು ಎಂದು ತೃಪ್ತಿಪಟ್ಟುಕೊಳ್ಳುತ್ತಿದ್ದೇವೆ. ನಮ್ಮ ಸಾಹಿತ್ಯ ನಮ್ಮ ಜಿಲ್ಲೆಯಲ್ಲಿ ನಮ್ಮ ಊರಿನಲ್ಲಿ, ನಮ್ಮ ಪ್ರಾಂತ್ಯದಲ್ಲಿ ಪ್ರಸಾರವಾದರೆ ಸಾಕು-ಹೊರಗೆ ಹೋದರೆಷ್ಟು ಬಿಟ್ಟರೆಷ್ಟು ಎನ್ನುವ ಮನೋಭಾವ ಬೆಳೆದುಬಂದಿದೆ.

ಆದರೆ ಸಮಷ್ಟಿದೃಷ್ಟಿಯಲ್ಲಿ ಸಾಹಿತ್ಯವನ್ನು ವಿವೇಚಿಸುವಾಗ ನಮ್ಮ ಸಾಹಿತ್ಯ ಫ್ರಾನ್ಸ್, ಇಂಗ್ಲೆಂಡ್, ಜರ್ಮನಿ ಸಾಹಿತ್ಯವನ್ನು ಸರಿಗಟ್ಟುವುದೇ ? ನಾವು ರೋಲಾ, ಮಾಯಾಕೊವಸ್ಕಿ, ಗಾರ್ಕಿ, ಸಿಂಕ್ಲೇರ್ ಅವರ ಕೃತಿಗಳನ್ನು ಓದುವಂತೆ ಹೊರಗಿನವರು ನಮ್ಮ ಕೃತಿಗಳನ್ನು ಓದಬೇಡವೇ? ಕನ್ನಡ ಸಾಹಿತ್ಯವನ್ನು ವಿಶ್ವಸಾಹಿತ್ಯದ ಮಟ್ಟಕ್ಕೆ ಏರಿಸಬೇಡವೇ ಎಂಬ ಮಹತ್ವದ ಪ್ರಶ್ನೆ ಹುಟ್ಟುತ್ತದೆ. (**ಕನ್ನಡ ಸಾಹಿತ್ಯದ ಕಹಳೆ ಕಡಲಾಚೆ ಹೋಗಬೇಕು, ಪ್ರಯತ್ನದಿಂದಲ್ಲ-ಪ್ರತಿಭೆಯಿಂದ**)

---

* "Literature and revolution are united not only by their common aim of liberating the human spirit, but also by immediate bonds of interest."

Malcolm Cowley in *American Writers' Congress*.

# ಕನ್ನಡ ನಾಟಕ

ಒಂದು ದೇಶದ ಸಾಹಿತ್ಯದ ಹೆಚ್ಚುಳವನ್ನು ಅದರ ನಾಟಕದ ಮಾನದಂಡದಿಂದ ಗುರುತಿಸುವುದು ವಾಡಿಕೆ. ಗ್ರೀಕರ, ಇಂಗ್ಲೀಷರ, ಫ್ರೆಂಚರ ಸಾಹಿತ್ಯಗಳಲ್ಲಿ ಸೀಮಾಪುರುಷರಾದ ನಾಟಕಕಾರರು ಹುಟ್ಟಿಕೊಂಡು ತಮ್ಮ ಪ್ರತಿಭೆಯಿಂದ ಇತರ ಸಾಹಿತ್ಯ ಪ್ರಕಾರಗಳನ್ನು ಮರೆಸಿದರು. ಸಂಸ್ಕೃತ ಸಾಹಿತ್ಯಕ್ಕೂ ಈ ಮಾತು ಅನ್ವಯಿಸುತ್ತದೆ. ಭಾಸ, ಕಾಳಿದಾಸ, ಭವಭೂತಿ, ಶೂದ್ರಕ ಮೊದಲಾದ ನಾಟಕಕಾರರು ಸಂಸ್ಕೃತ ಸಾಹಿತ್ಯಕ್ಕೆ ಬುನಾದಿ ಹಾಕಿದರು. ಭಾರತೀಯ ಪ್ರಾಂತ್ಯ ಭಾಷೆಗಳಲ್ಲಿ ನಾಟಕಕ್ಕೆ ಇಂತಹ ಪ್ರಧಾನ್ಯ ದೊರೆಯಲಿಲ್ಲ. ಸಂಸ್ಕೃತ ನಾಟಕಕ್ಕಿಂತ ಸಂಸ್ಕೃತ ಚಂಪೂಕಾವ್ಯ ಪ್ರಾಂತ್ಯಭಾಷೆಗಳ ಮೇಲೆ ಹೆಚ್ಚಿನ ಪ್ರಭಾವ ಬೀರಿದಂತೆ ಕಂಡುಬರುತ್ತದೆ.

ಗ್ರೀಕ್, ಇಂಗ್ಲೀಷ್, ಸಂಸ್ಕೃತ ಭಾಷೆಗಳಿಗಿರುವಂತೆ ಕನ್ನಡಕ್ಕೆ ನಾಟಕದ ಪ್ರಾಚೀನ ಪರಂಪರೆಯಿಲ್ಲದಿರುವುದೊಂದು ದೊಡ್ಡ ಕೊರತೆ. ಹತ್ತೊಂಭತ್ತನೆಯ ಶತಮಾನದಾನಂತರ ವಿಶ್ವಸಾಹಿತ್ಯ ಪ್ರಾಚೀನ ಪರಂಪರೆಯನ್ನು ಅಷ್ಟಾಗಿ ಲಕ್ಷಿಸಿದಂತೆ ಕಂಡುಬರುವುದಿಲ್ಲ. ಇಬ್ಸನ್, ಷಾ, ಯೂಜಿನ್ ಓನೀಲ್, ಸ್ಟ್ರಿಂಡ್‌ಬರ್ಗ್, ಕ್ಲಿಫರ್ಡ್ ಆಡೆಟ್ಸ್, ಅರ್ನೆಸ್ಟ್ ಟಾಲರ್ ಮೊದಲಾದ ನಾಟಕಕಾರರು ನಾಟಕದ ವ್ಯಾಪ್ತಿಯನ್ನು

ವಿಸ್ತರಿಸಿ ಅದನ್ನು ಸಾಮಾಜಿಕ, ರಾಜಕೀಯ, ಸಾಮಾಜಿಕ, ಮಾನಸಿ
ಸಮಸ್ಯೆಗಳ ಪೃಥಃಕರಣ ಸಾಧನವನ್ನಾಗಿ ಉಪಯೋಗಿಸಿಕೊಂಡರು.

ಇಂಗ್ಲಿಷ್ ಭಾಷೆಯ ಸಾಹಿತ್ಯಕ್ಕೆ ದೊರೆತಿರುವ ಲೋಕಾದರಕೆ
ಅದರ ರೂಢಿರೂಪಕ್ಕೂ ಸಾಹಿತ್ಯರೂಪಕ್ಕೂ ಇರುವ ಸಾಮ್ಯವೂ ಒಂದ
ಕಾರಣ. ಜನರು ರೂಢಿಯಲ್ಲಿ ಉಪಯೋಗಿಸುವ ಇಂಗ್ಲಿಷ್ ಭಾಷೆಗ
ಸಾಹಿತ್ಯದ ಭಾಷೆಗೂ ವಿಶೇಷ ಅಂತರವಿಲ್ಲ. ಆದರೆ ಕನ್ನಡದಲ್ಲಿ ಈ
ಅಂತರ ಒಡೆದು ಕಾಣುತ್ತದೆ. ಪಂಡಿತರು, ವಿವಿಧ ಕಳಾಮಂಡಿತ
ಗಾಗಿ ಬರೆಯಲ್ಪಡುವ ಕೃತಿಯ ಭಾಷೆ ಜನತೆಗೆ ಕಬ್ಬಿಣದ ಕಡಲೆ
ಜನಪದದ ಭಾಷೆ, ಭಾವ, ವಿಚಾರಗಳನ್ನಳವಡಿಸಿಕೊಂಡು ನಾಟಕವನ್ನ
ಅವರ ವಿಕಾಸ, ವಿಹಾರಗಳ ಸಾಧನವನ್ನಾಗಿ ಉಪಯೋಗಿಸಬೇಕೆಂ
ದೃಷ್ಟಿ ಪ್ರಾಚೀನ ಕನ್ನಡ ಕವಿಗಳಲ್ಲಿ ಕಂಡುಬರುವುದಿಲ್ಲ.

ಜನತೆಯ ಭಾಷೆಯನ್ನು ಸಾಹಿತ್ಯಕ್ಕೆ ತರುವ ಪ್ರಯತ್ನವನ್
ಕಾದಂಬರಿಕಾರ ಎಂ. ಎಸ್. ಪುಟ್ಟಣ್ಣನವರೂ, ನಾಟಕಕಾರ ಟಿ. ಪಿ
ಕೈಲಾಸಂ ಅವರೂ ಮೊದಲಿನಲ್ಲಿ ಮಾಡಿದರು. (ಕನ್ನಡ ಜನತೆಯ
ಸಂಸ್ಕೃತಿಯನ್ನು ಪ್ರತಿಬಿಂಬಿಸಿ, ನಾಟಕವನ್ನು ಅವರ ಆಸೆ, ಆಕಾಂಕ್ಷೆ
ಸೋಲು ಗೆಲವು, ಶಾಂತಿ ಉದ್ವೇಗಗಳ ರನ್ನಗನ್ನಡಿಯನ್ನಾಗಿ ಮಾಡಿ
ಕೀರ್ತಿ ಕೈಲಾಸಂ ಅವರದು.) ಕೈಲಾಸಂ ಜನತೆಯ ಭಾಷೆಯನ್ನ
ಬಳಸಿಕೊಂಡದ್ದಲ್ಲದೆ ಅವರ ಜೀವನ ಚಿತ್ರವನ್ನು, ಸಮಸ್ಯೆಗಳನ್ನು ನಗೆಯ
ಸಾಧನದಿಂದ ಬಿಡಿಸಿ ತೋರಿಸಿದರು. ಲೋಕಕಲ್ಯಾಣವನ್ನೇ ತಮ
ಹೆಗ್ಗುರಿಯಾಗಿಟ್ಟುಕೊಂಡು ಕನ್ನಡ ಜನತೆ ತಮ್ಮ ಅಧಿವ್ಯಾಧಿಗಳನ್ನ
ಹೇಗೆ ನೀಗಿಕೊಂಡು ಮಾನವ ಸಮಾಜದಲ್ಲಿ ತಲೆಯೆತ್ತಿ ಪುರುಷೋತ
ಮರ ಹಾಗೆ ಬಾಳಬಹುದೆಂಬುದನ್ನು ನಿರ್ದೇಶಿಸಿದರು.

ಕನ್ನಡ ಸಾಹಿತ್ಯಕ್ಕೆ ರಾಷ್ಟ್ರೀಯ ಮುಖವನ್ನು ಕೈಲಾಸಂ ನಿರ್ಮಿ
ಕೊಟ್ಟಂತೆ ಅಂತರ-ರಾಷ್ಟ್ರೀಯ ಮುಖವನ್ನು ನಿರ್ಮಿಸಿ ಕೊಟ್ಟವರ
ಬಿ. ಎಂ. ಶ್ರೀಕಂಠಯ್ಯನವರು. ಗ್ರೀಕರ ಅಜಾಕ್ಸ್, ಪರ್ಶಿಯನ್ಸ್ ಎಂ
ಎರಡು ರುದ್ರನಾಟಕಗಳ ಆಧಾರದ ಮೇಲೆ 'ಅಶ್ವತ್ಥಾಮನ್'–'ಪಾ
ಸಿಕರು' ನಾಟಕಗಳನ್ನು ರಚಿಸಿ ಮಾನವತ್ವದ ಏಕಮುಖವನ್ನು ಶ್ರೀಯವರ

ಸೂಚಿಸಿದರು. ಅವರ ಮೇಲ್ಪಂಕ್ತಿಯನ್ನನುಸರಿಸಿ ಅವರ ಕೆಲವು ಶಿಷ್ಯರು ಗ್ರೀಕ್ ಮತ್ತು ಫ್ರೆಂಚ್ ಸಾಹಿತ್ಯಗಳಿಂದ ನಾಟಕಗಳನ್ನಾಯ್ದು ಕನ್ನಡಕ್ಕೆ ಅನುವಾದ ಮಾಡಿದರು. ಶ್ರೀಯುತರ ಪ್ರಭಾವಕ್ಕೆ ಸಿಕ್ಕಿದ ಎಸ್. ಜಿ. ಶಾಸ್ತ್ರಿಗಳು ಇಬ್ಸನ್ನನ ಕೆಲವು ನಾಟಕಗಳನ್ನು ಕನ್ನಡಕ್ಕೆ ತಂದರು.

ಅನುವಾದ, ಅವಲಂಬನಗಳ ಜತೆಗೆ ಸ್ವತಂತ್ರವಾಗಿಯೂ ನಾಟಕಗಳು ಬರತೊಡಗಿದವು. ಕೆ. ವಿ. ಪುಟ್ಟಪ್ಪ, ಎಂ. ಗೋವಿಂದ ಪೈ, ಎಂ. ಆರ್. ಶ್ರೀ, ಪು. ತಿ. ನರಸಿಂಹಾಚಾರ್ಯರು ಸರಳರಗಳೆಯ ಸೌಲಭ್ಯ, ವ್ಯಾಪ್ತಿ, ನಾಟಕೀಯತೆಗಳನ್ನು ತಂದುಕೊಂಡು ಮನೋಹರವಾದ ಶ್ರವ್ಯಕಾವ್ಯಗಳನ್ನು ರಚಿಸಿದರು.

ರುದ್ರನಾಟಕ ಪರಂಪರೆ ಕನ್ನಡಕ್ಕೆ ತೀರ ಹೊಸದು. ಅದರ ಪರಿಚಯವನ್ನು ಶ್ರೀಯವರು ಗ್ರೀಕ್ ನಾಟಕದಿಂದ ಮಾಡಿಕೊಡುತ್ತಿದ್ದಂತೆ ಸ್ವತಂತ್ರ ರುದ್ರನಾಟಕಗಳನ್ನು ಬರೆದು ಕನ್ನಡಕ್ಕೆ ನವಶೋಭೆಯನ್ನುಂಟು ಮಾಡಿದವರು ಸಂಸರು. ಇವರ ಸುಗುಣ–ಗಂಭೀರ, ಬಿರುದೆಂತೆಂಬರ ಗಂಡ, ವಿಗಡ ವಿಕ್ರಮರಾಯ ನಾಟಕಗಳು ಕನ್ನಡಕ್ಕೆ ಹೊಸ ಜಾಡನ್ನು ಹಾಕಿಕೊಟ್ಟು ಕನ್ನಡ ನಾಟಕಗಳ ಭವಿಷ್ಯವನ್ನು ಸುದೃಢ ಮಾಡಿದವು.

ಈ ಎರಡು ದಶಕಗಳಲ್ಲಿ ಸಾಮಾಜಿಕ ನಾಟಕ ಕನ್ನಡದಲ್ಲಿ ನಾನಾಮುಖವಾಗಿ ಬೆಳೆಯಿತು. ಆರ್. ವಿ. ಜಾಗಿರ್‌ದಾರ್, ಶಿವರಾಮ ಕಾರಂತ, ಅ. ನ ಕೃ, ವಿವಿಧ ವಸ್ತು, ಸಮಸ್ಯೆ, ದೃಷ್ಟಿಗಳನ್ನು ನಾಟಕದಲ್ಲಿ ತಂದುಕೊಟ್ಟರು. ಹಾಸ್ಯರಸಪ್ರಧಾನವಾದ ನಾಟಕಗಳ ಜತೆಗೆ ಗಂಭೀರ ವಿಷಯ ಪ್ರತಿಪಾದನೆ ಮಾಡುವ ನಾಟಕಗಳು ಇವರ ಪ್ರಯತ್ನದಿಂದ ಬಂದವು. ಈಚೆಗೆ ಕ್ಷೀರಸಾಗರ, ಪರ್ವತವಾಣಿ, ಕೈವಾರ ರಾಜಾರಾಯ, ಕಸ್ತೂರಿ ಮೊದಲಾದವರು ಹಾಸ್ಯಪ್ರಧಾನವಾದ ಲಘು ನಾಟಕಗಳನ್ನು ರಚಿಸಿ ಜನತೆಯ ಮನರಂಜನೆಯನ್ನು ಮಾಡುತ್ತಿದ್ದಾರೆ. ಸಿ. ಕೆ. ವೆಂಕಟರಾಮಯ್ಯನವರು ಪೌರಾಣಿಕ ವಿಷಯಗಳ ಮೇಲೆ ಕೆಲವು ಉತ್ತಮ ನಾಟಕಗಳನ್ನು ರಚಿಸಿದ್ದಾರೆ.

ಕನ್ನಡದಲ್ಲಿ ಕಾದಂಬರಿ, ಕತೆ, ಭಾವಗೀತೆ ಬೆಳೆದ ಪ್ರಮಾಣದಲ್ಲಿ ನಾಟಕಗಳು ಬೆಳೆದಿಲ್ಲವೆನ್ನುವುದು ಸ್ವತಃಸ್ಸಿದ್ಧ. ಇದಕ್ಕೆ ಕಾರಣ ನಾಟ್ಯ

ವಿಲಾಸಿಗಳಿಗೂ, ನಾಟ್ಯೋಪಜೀವಿಗಳಿಗೂ ಇರುವ ಅಂತರ. (ಸಾಹಿತ್ಯೋಪಾಸಕರು ಬರೆದ ನಾಟಕಗಳು, ನಾಟಕಮಂಡಳಿಯವರ ಕೃಪೆಗೆ ಪಾತ್ರವಾಗುವುದಿಲ್ಲ. ಮಂಡಳಿಗಳ ಕವಿಗಳು ಬರೆಯುವ ನಾಟಕಗಳಿಗೆ ಸಾಹಿತ್ಯ ಸಾಮ್ರಾಜ್ಯದಲ್ಲಿ ಸ್ಥಾನವಿಲ್ಲ.) ಸಾಹಿತ್ಯೋಪಾಸಕರ ನಾಟಕಗಳು ಶಾಲೆ ಕಾಲೇಜು ಕರ್ನಾಟಕ ಸಂಘಗಳ ಹಬ್ಬಗಳಿಗೆ ಮಾತ್ರ ಮೀಸಲು. ಅವುಗಳಿಗೆ ವಿಶಾಲ ರಂಗದ ಅನುಕೂಲವಿಲ್ಲದಿರುವುದರಿಂದ ಲಘು ಹಾಸ್ಯಪ್ರಧಾನವಾದ ಏಕಾಂಕ ನಾಟಕಗಳು ಮಾತ್ರ ಹೊರಬರಲು ಸಾಧ್ಯವಾಗಿದೆ. ಬರೆದ ನಾಟಕಗಳು ಅಚ್ಚಿನ ಮುಖ, ರಂಗದ ಮುಖ ಕಂಡ ಹೊರತೂ ಸಂಖ್ಯೆ, ಹಾಗೂ ಗುಣ ಪ್ರಮಾಣದಿಂದ ನಾಟಕಗಳು ಹೆಚ್ಚು ಬರಲು ಸಾಧ್ಯವಿಲ್ಲ.

ಕನ್ನಡಿಗರಿಗೆ ಒಳ್ಳೆಯ ನಾಟಕ ಸಾಹಿತ್ಯ ದೊರೆಯಬೇಕಾದರೆ ಮೊದಲು ರಂಗಮಂದಿರ ನಿರ್ಮಾಣವಾಗಬೇಕು. ರಾಷ್ಟ್ರೀಯ ಜನತಾ ರಂಗಭೂಮಿಯ ಸ್ಥಾಪನೆಯೊಂದೇ ಈ ಸಮಸ್ಯೆಯನ್ನು ಬಗೆಹರಿಸಬಲ್ಲುದು.

(ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ನಾಟಕವೊಂದೇ ಪಂಡಿತ ಪಾಮರರಿಬ್ಬರನ್ನೂ ರಂಜಿಸಬಲ್ಲುದು. ಅಪ್ರಾರ್ಥಿತವಾಗಿ ಜನತೆಯ ಮನಸ್ಸನ್ನು ಶುಚಿಗೊಳಿಸಿ, ಅವರಿಗೆ ನಿತ್ಯನಿರ್ಮಲಾನಂದವನ್ನು ಒದಗಿಸುವ ಚೇತನ ನಾಟಕಕ್ಕಿದೆ.) ಭಾರತದ ಸರ್ವತೋಮುಖ ಪ್ರಗತಿಯನ್ನು ಕುರಿತು ಆಳವಾಗಿ ವಿಚಾರಮಾಡುತ್ತಿರುವವರು ನಾಟಕದ ಪುನರುದ್ಧಾರವನ್ನೂ ಕುರಿತು ಆಲೋಚಿಸಬೇಕು. ಅಮೇರಿಕಾ, ರಷ್ಯಾ, ಚೀನಾ ದೇಶಗಳು ನಾಟಕವನ್ನು ಜನತೆಯ ಶಿಕ್ಷಣ ಸಾಧನವಾಗಿ ಉಪಯೋಗಿಸಿಕೊಂಡು ತಮ್ಮ ರಾಷ್ಟ್ರಗಳನ್ನು ಕಟ್ಟಿಕೊಂಡ ಮೇಲ್ಪಂಕ್ತಿ ಅನುಕರಣೀಯವಾಗಿದೆ. ಸಾಹಿತ್ಯ, ಕಲಾದೃಷ್ಟಿಯಿಂದ ನಾಟಕಗಳ ಉತ್ಕರ್ಷಕ್ಕೆ ನಾವು ಗಮನಕೊಡುವುದು ಮಾತ್ರವಲ್ಲದೆ ಜನಪದದ ಶಿಕ್ಷಣ, ಜೀವನ, ಭಾವನೆಗಳನ್ನು ರೂಪಿಸುವ ದೃಷ್ಟಿಯಲ್ಲಿಯೂ ನಾವು ಅದರ ಬದುಕನ್ನು ಗಮನಿಸಬೇಕು. (ನಾಟಕ ಜೀವಂತ ರಾಷ್ಟ್ರದ ಪ್ರತೀಕ. ಅಮರ ಭಾರತವನ್ನು ಕಟ್ಟಲು ಹೊರಟಿರುವ ನಾವು ಅದರ ಬುನಾದಿಗೆ ನಾಟಕವೂ ಬೇಕೆನ್ನುವುದನ್ನು ಮರೆಯಬಾರದು.)

# ಪ್ರತಿಭಾಶಾಲಿ ಕೈಲಾಸಂ

ಕೈಲಾಸಂ ಹುಟ್ಟಿ ಅರವತ್ತುನಾಲ್ಕು ವರ್ಷಗಳಾದವು; ಅವರು ಸಾಹಿತ್ಯ ರಂಗಕ್ಕೆ ಪ್ರವೇಶಿಸಿ ಇಪ್ಪತ್ತೇಳು ವರ್ಷಗಳಾದವು. ಅವರು ಕೈಲಾಸವಾಸಿಗಳಾಗಿ ಮೂರು ವರ್ಷಗಳಾದವು. ಈ ಅವಧಿಯಲ್ಲಿ ಅವರ ಕೀರ್ತಿಜ್ಯೋತಿ ವಿಧವಿಧ ಆಂದೋಲನಕ್ಕೀಡಾಯಿತು. ಟೊಳ್ಳು ಗಟ್ಟಿ ಕಾಲದ ತಾತ್ಸಾರ, ವೀರ ಪೂಜೆಗೆಡೆಕೊಟ್ಟಿತು; ವೀರಪೂಜೆ ಸ್ತಬ್ಧತೆಗೆಡೆಕೊಟ್ಟಿತು; ಸ್ತಬ್ಧತೆ ಅಮಿತಗುಣಗಾನಕ್ಕೆಡೆಕೊಟ್ಟಿತು. ಈ ಸ್ತುತಿ ನಿಂದೆಗಳನ್ನು ದಾಟಿ ನಿಂತಿರುವ ನಾವು ಅವರ ಬಗ್ಗೆ ನಿಷ್ಪಕ್ಷ ಪಾತ ದೃಷ್ಟಿಯನ್ನು ತಳೆದು ಅವರ ಕೃತಿಗಳ ವಾಸ್ತವಿಕ ವಿಮರ್ಶೆ ಮಾಡಲು ಈಗ ಸಾಧ್ಯವಾಗಿದೆ.

ಕೈಲಾಸಂ ಜೀವನ, ಕೃತಿ ಎರಡೂ ಇಂದಿಗೂ ಸಮಸ್ಯೆಗಳಾಗಿ ಉಳಿದಿವೆ. ಅವರು ಹೆಣ್ಣನ್ನು ತಾಯಿಯೆಂದು ಪೂಜಿಸಿ, ವಿದ್ಯಾವತಿ ಯೆಂದು ಹಳಿದುದೇಕೆ? ಜಾತಿ ಮತಗಳ ಕಟ್ಟನ್ನು ಸಡಲಿಸಿದ ಕೈಲಾಸಂ ಅವುಗಳ ಪ್ರಾಶಸ್ತ್ಯವನ್ನು ಮತ್ತೆ ಎತ್ತಿ ಹಿಡಿದುದೇಕೆ? ಹೈತುಕವಾದಿ ಯಾದ ಕೈಲಾಸಂ ಪ್ರಾರಬ್ಧವಾದಿಯಾದುದೇತಕ್ಕೆ? — ಮೊದಲಾದ ಸಮಸ್ಯೆಗಳು ಉತ್ತರವನ್ನೆದುರು ನೋಡುತ್ತಿವೆ.

ಅವರ ಕೃತಿಗಳಲ್ಲಿ ಅಚ್ಚಾಗಿರುವವು ಕೆಲವು; ಅಚ್ಚಾಗದಿರುವವು ಹಲವು. ಅಚ್ಚಾಗಿರುವ ಕೃತಿಗಳ ಆಧಾರದಿಂದ ಕೈಲಾಸಂ ಪ್ರತಿಭೆಯನ್ನು ಬೆಲೆಕಟ್ಟುವುದು ಯೋಗ್ಯವಾದೀತೆ? ಅಚ್ಚಾಗದಿರುವ ಅವರ ಕೃತಿಗಳು ನಾಶವಾಗಿಲ್ಲ—ಅದೇ ನಮ್ಮ ಭಾಗ್ಯ. ಅವರ ಅಂತರಂಗ ಭಕ್ತರಾದ ಶ್ರೀ ಬಿ. ಎಸ್. ರಾಮರಾಯರು ಅವುಗಳಲ್ಲಿ ಒಂದಾದ 'ಕೀಚಕ' ನನ್ನು ಈಗಾಗಲೇ ಪುನರುಜ್ಜೀವನ ಗೊಳಿಸಿದ್ದಾರೆ. ಕನ್ನಡಿಗರು ಕಾರ್ಪಣ್ಯಬಿಟ್ಟರೆ ರಾಮರಾಯರು ಉಳಿದುವನ್ನು ಬದುಕಿಸಬಲ್ಲರು. ಕೈಲಾಸಂ ಶಬ್ದಗಳಲ್ಲಿಯೇ ಅವರ ನಾಟಕಗಳನ್ನು ಕೊಡಬಲ್ಲರು.

ಆದರೆ ಕೈಲಾಸಂ ಕೃತಿಗಳನ್ನೆಲ್ಲಾ ನಿರೀಕ್ಷಿಸುತ್ತಾ ಕೈಕಟ್ಟಿ ಕೂಡುವುದು ವಿವೇಕವಲ್ಲ. ಕಾಲಕಾಲಕ್ಕೆ ಜನಕ್ಕೆ ಈ ಪ್ರತಿಭಾಶಾಲಿಯ ಹೆಸರು, ಕೃತಿಗಳ ನೆನವು ಮಾಡಿಕೊಡುತ್ತಿರಬೇಕು ಹಲವು ಹನ್ನೊಂದು ವಿಚಾರಗಳಲ್ಲಿ ಮಗ್ನರಾಗಿರುವ ಜನ ಕೈಲಾಸಂ ಅವರನ್ನು ಮರೆಯದಂತೆ ಮಾಡುವ ಪ್ರಯತ್ನ ಸತತವಾಗಿ ಸಾಗಬೇಕು

ಕನ್ನಡನುಡಿಶ್ರೀಯನ್ನು ಬಂಗಾರದ ಬಂಧನದಿಂದ ಬಿಡಿಸಿದ ಕೀರ್ತಿ ಮಹಾಕವಿ ಹರಿಹರನದು. ಚಂಪೂಕಾವ್ಯವನ್ನು ಬರೆದು 'ಕವಿ ಚಕ್ರವರ್ತಿ' ಪ್ರಶಸ್ತಿಗೆ ಅವಶ್ಯಕವಾದ ಅರ್ಹತೆಯನ್ನೊದಗಿಸಿಕೊಂಡ ಕವಿ ಸತ್ಯದ ಕರೆಗೆ ಓಗೊಟ್ಟು ರಗಳೆಗಳನ್ನು ಹಾಡಿದ. ಜನ ಅವನನ್ನು 'ರಗಳೆಯ ಕವಿ' ಎಂದು ಜರಿದರು. ಆದರೆ ಅಂದು ಹರಿಹರ ಜನತೆಯ ಜರಿದಾಟವನ್ನು ಪ್ರತಿಭಟಿಸಿ ನಿಲ್ಲದಿದ್ದರೆ ಕನ್ನಡ ತಾಯಿಯ ಬಂದಂಗ ಊನವಾಗುತ್ತಿತ್ತು. ಇತಿಹಾಸದ ಪುನರಾವತಾರವನ್ನು ಕೈಲಾಸಂ ಅವರಲ್ಲಿ ಕಾಣಬಹುದು. ಪ್ರಸಾರದಲ್ಲಿದ್ದ ವ್ಯಾಕರಣಬದ್ಧ ಭಾಷೆಯನ್ನು ಬಿಟ್ಟು ಕೈಲಾಸಂ ಜನರು ಆಡುವ ಭಾಷೆಯಲ್ಲಿ ಬರೆಯತೊಡಗಿದರು. ವ್ಯಾಕರಣ ಛಂದಸ್ಸಿನ ಸೂತ್ರಗಳನ್ನು ಗಾಳಿಗೆ ತೂರಿದರು. ಭಾಷೆಗಿಂತ ಭಾವಕ್ಕೆ ಪ್ರಾಧಾನ್ಯ ಕೊಟ್ಟು ಒಂದು ನೂತನ ಪ್ರಯೋಗವನ್ನು ಸಾಧಿಸಿದರು. ತಾವು ಬಳಸಿದ ಭಾಷೆಯನ್ನು 'ಕನ್ನಡಾಂಗ್ಲೋ' ಭಾಷೆ ಎಂದು ಕರೆದರು. ಅದನ್ನೇ ನಾವು 'ಕೈಲಾಸಂ ಕನ್ನಡ' ಎಂದು ಕರೆಯಬಹುದು. ಕೈಲಾಸಂ ಬೆಳಸಿದ ಭಾಷೆಯಿಂದ

ಅನಾನುಕೂಲವೂ ಆಯಿತು. ಆಂಗ್ಲ ಭಾಷೆಯ, ಹಾಗೂ ಸಂಸ್ಕೃತಿಯ ಪರಿಚಯವಿಲ್ಲದವರಿಗೆ ಕೈಲಾಸಂ ನಾಟಕಗಳು ಕಬ್ಬಿಣದ ಕಡಲೆ. ಅವರ ತಾವರೆಕೆರೆ ಅರ್ಥವಾಗಬೇಕಾದರೆ ಓದುಗ ಕನ್ನಡ, ಇಂಗ್ಲಿಷು, ತೆಲುಗು, ತಮಿಳು, ಉರ್ದು ಭಾಷೆಗಳಲ್ಲಿ ಪಾರಂಗತನಾಗಿರಬೇಕು. ಕೈಲಾಸಂ ಭಾಷೆಯ ವಿಚಾರದಲ್ಲಿ ವಹಿಸಿದ ಸ್ವಾತಂತ್ರ್ಯದಿಂದ ಅವರ ಕೃತಿಗಳ ವ್ಯಾಪ್ತಿ ಸಂಕುಚಿತವಾಯಿತು. ರಂಗಭೂಮಿಯ ನೆರವಿಲ್ಲದೆ ಅವರ ನಾಟಕಗಳು ಶೋಭಿಸುವುದು ದುಸ್ತರವಾಯಿತು. ವ್ಯಾಕರಣದ ಮರಳು ಗಾಡಿನಲ್ಲಿ ಹೊಕ್ಕು 'ಕಡಿಮೆ—ಕಡಮೆ' 'ಕರ್ನಾಟಕ—ಕರ್ಣಾಟಕ' ಶಬ್ದಗಳ ಜಾಡು ಹುಡುಕುತ್ತಿದ್ದ ಕನ್ನಡ ವಿದ್ವಾಂಸರಿಗೆ ಕೈಲಾಸಂ ವಹಿಸಿದ ಸ್ವಾತಂತ್ರ್ಯ ಕರ್ಣಕಠೋರವಾದುದೂ ಸಹಜವೇ! ಆದರೆ ಶಬ್ದವಾದಿಗಳ ಮನಸ್ಸಿನಮೇಲೆ ವಿಚಾರದ ತಂಗಾಳಿ ತೀಡಿ ಅವರನ್ನು ಎಚ್ಚರಿಸುವ ಕೆಲಸವನ್ನು ಕೈಲಾಸಂ ಕೈಗೊಳ್ಳದಿದ್ದರೆ ನಾವು ಇನ್ನೂ ಬಹಳ ಹಿಂದೆಯೇ ಉಳಿಯುತ್ತಿದ್ದೆವೆಂಬುದು ನಿರ್ವಿವಾದ. ಅಣಕವನ್ನು ಬಳಸಿಕೊಂಡು ಕೈಲಾಸಂ ನಾಡಿನ ವಿಕಾರಮುಖಕ್ಕೆ ಕೈಗನ್ನಡಿ ತೋರಿದರು. ಲಲಿತವಹ ಕನ್ನಡನುಡಿಗೆ ನಾವು ಮಾಡಿರುವ ಅಪಚಾರವನ್ನು ಮನಮುಟ್ಟುವಂತೆ ಚಿತ್ರಿಸಿದರು. ಕೈಲಾಸಂ ಇತ್ತ ಕನ್ನಡಿಗರ ಲಕ್ಷ್ಯವನ್ನು ಸೆಳೆದುದರಿಂದಲೇ ಡಿ. ವಿ. ಗುಂಡಪ್ಪ, ಆಲೂರ ವೆಂಕಟರಾಯರ ವೀರಗದ್ಯ, ಮಾಸ್ತಿ, ಪಂಜೆ, ಚಿದಂಬರಯ್ಯನವರ ಲಲಿತಗದ್ಯ, ತಾರಾನಾಥ, ಗೋವಿಂದ ಪೈ ಇವರ ವಿಚಾರಪೂರ್ಣ ಗದ್ಯದ ಕಡೆಗೆ ಜನ ಕಣ್ಣು ಬಿಟ್ಟು ನೋಡುವಂತಾದುದು.! ಭಾವ, ಭಾಷೆಗಳೆಂಬ ಎರಡು ಅಶ್ವಗಳನ್ನು ಹೂಡಿ ಮುಂದಿನ ಲೇಖಕರು ಸ್ವತಂತ್ರವೂ, ಸುಭಗವೂ ಆದ ಗದ್ಯಶೈಲಿಯನ್ನು ರೂಪಿಸಲು ಕೈಲಾಸಂ ಅವರ ಸ್ವಚ್ಛಂದ ಛಂದ ಕಾರಣವಾಯಿತು.

ಕೈಲಾಸಂಯುಗ ಆರಂಭವಾಗುವುದಕ್ಕೆ ಮುಂಚೆ ಕನ್ನಡದಲ್ಲಿ ಹೇಳಿಕೊಳ್ಳುವ ನಾಟಕಗಳೇ ಇರಲಿಲ್ಲ. ರಂಗಭೂಮಿಯ ಮೇಲೆ ಖ್ಯಾತಿವೆತ್ತಿದ್ದ ನಾಟಕಗಳು ಸಂಸ್ಕೃತ, ಇಂಗ್ಲಿಷ್ ನಾಟಕಗಳ ಭಾಷಾಂತರ, ರೂಪಾಂತರಗಳು. ಸ್ವತಂತ್ರವೆನಿಸಿಕೊಂಡಿದ್ದ ನಾಟಕಗಳು

ಎರಾರಿ, ಪಾರ್ಸಿ ಕಂಪೆನಿಗಳ ನಾಟಕಗಳ ಛಾಯಾನುವರ್ತಿಗಳು. ಆಗ ಪ್ರಚಾರದಲ್ಲಿದ್ದ ನಾಟಕಗಳಲ್ಲಿ ನಾಟಕೀಯತೆಯೇ ಇಲ್ಲ. ಅವು ಪುರಾಣ ಳ ಸಂಭಾಷಣಾ ರೂಪಗಳು. ನಾಟಕ ರಚನೆಗೆ ಮನಸ್ಸು ಹಾಕ ೇಕೆಂದಿದ್ದ ಭಾವೀ ನಾಟಕಕಾರನಿಗೆ ಯಾವ ಮಾರ್ಗದರ್ಶನವೂ ವುಗಳಿಂದ ದೊರೆಯುವಂತಿರಲಿಲ್ಲ ನಟನ ಪ್ರತಿಭಾ ಪ್ರಕಾಶಕ್ಕೆ ಾಟಕಗಳು ನೆರವಾದರೆ ಆಯಿತು. ನಾಟಕಗಳ ಉದ್ದೇಶವಾದರೂ ನರಂಜನೆಯ ಮಿತಿಯನ್ನು ಬಿಟ್ಟಿರಲಿಲ್ಲ. ಭಕ್ತಿಯ ಅಫೀಮಿನ ಪ್ರಯೋಗವನ್ನು ನಾಟಕಕಾರರು ಚೆನ್ನಾಗಿ ಅರಿತಿದ್ದರು. ಜಾರ ಕೋರ ಕೃಷ್ಣ, ಜಗಳಗಂಟಿಕ ನಾರದ, ದುರ್ಬಲ ರಾಮ, ಕಾಮಾಂಧ ೀಚಕ, ಮದೋನ್ಮತ್ತ ದುರ್ಯೋಧನ, ಅಸಹಾಯಕ ಕರ್ಣರು ರಂಗ ೂಮಿಯಮೇಲೆ. ಭಾರತ ಪುರಾಣ, ಇತಿಹಾಸಗಳನ್ನ ಪರಿಹಾಸ ಾಡುತ್ತಿದ್ದರು. ಸಂಸ್ಕೃತಿಯ ದೃಷ್ಟಿಯಿಂದ, ಹಾಗೂ ಜೀವನವನ್ನು ್ರತಿಬಿಂಬಿಸುವ ದೃಷ್ಟಿಯಿಂದ ನಾಟಕಗಳು ತೀರ ಹಿಂದುಳಿದಿದ್ದವು. ಇಂಥ ರಿಸ್ಥಿತಿಯಲ್ಲಿ ಕೈಲಾಸಂ ತಮ್ಮ 'ಏಕಲವ್ಯ' 'ಕರ್ಣ' ನಾಟಕಗಳನ್ನೂ ಅಮ್ಮಾವ್ರಗಂಡ—ಟೊಳ್ಳುಗಟ್ಟಿ—ಪೋಲಿಕಿಟ್ಟಿ' ಮೊದಲಾದ ಪ್ರಹಸನ ಳನ್ನೂ ಕನ್ನಡಿಗರ ಮುಂದೆ ಇಟ್ಟರು. ನಾಟಕ ಜೀವನದ ಪ್ರತಿಬಿಂಬ ಾಗಬೇಕು, ಜನತೆ ತಾವು ಕಣ್ಣಿದ್ದೂ ನೋಡದಿರುವ ನೋಟಗಳನ್ನು ಾಟಕಕಾರನ ಕಣ್ಣಿನಿಂದ ನೋಡಬೇಕು. ಆದರಿಂದ ಅವರ ವಿಹಾರ ಾಗೂ ವಿಕಾಸ ಎರಡೂ ಸಾಧಿಸಬೇಕೆಂಬುದು ಕೈಲಾಸಂರವರ ಗುರಿ ಾಯಿತು. ಪೋಲಿಕಿಟ್ಟಿ, ಹೋಂ ರೂಲು ನಾಟಕಗಳಲ್ಲಿ ತಿಳಿ ಾದ ಹಾಸ್ಯವನ್ನು ಅಳವಡಿಸಿಕೊಂಡ ಕೈಲಾಸಂ ಬಹಿಷ್ಕಾರ, ಮ್ಮ ಬ್ರಾಹ್ಮಣಿಕೆ, ಸೂಳೆ ನಾಟಕಗಳಲ್ಲಿ ಪ್ರಬಲವಾದ ಸಾಮಾಜಿಕ ಮಸ್ಯೆಗಳನ್ನೆತ್ತಿಕೊಂಡು ಅವುಗಳನ್ನು ಪೃಥಃಕ್ಕರಿಸಲೆತ್ನಿಸಿದರು. ನಗೆ ೂಪ ಹಾಕಿದರೂ ಅದರ ಹಿಂದಿದ್ದ ಉಜ್ವಲ ಜ್ವಾಲಾಮುಖಿಯ ಕಡೆಗೆ ಚಾರವಂತರ ಗಮನ ಸೆಳೆದರು.

ಭಾರತೀಯ ಪುರಾಣ ಇತಿಹಾಸಗಳನ್ನು ನಮ್ಮ ಜನ ಬಳಸಿಕೊಳ್ಳು ದನ್ನು ಪ್ರಸ್ತಾಪಿಸುತ್ತಾ 'ಹಿಂದುಗಳ ಕೈಯಲ್ಲಿ ಅವರ ದೇವಾದಿ

ದೇವತೆಗಳು ಘುಂಗವನ್ನು ಕುಣಿಸುವವನ ಕೈಗೆ ಮಂಗ ಸಿಕ್ಕಿದಂತಾಗಿದೆ' ಎಂದು ಕವಿ ರವೀಂದ್ರರು ಹೇಳಿದ್ದಾರೆ. ಕೈಲಾಸಂ ರಾಮಾಯಣ, ಭಾರತ, ಭಾಗವತಗಳನ್ನು ಕರತಲಾಮಲಕ ಮಾಡಿಕೊಂಡು, ತಮ್ಮ ಏಕಲವ್ಯ, ಕರ್ಣ, ಭೀಷ್ಮ, ಕೃಷ್ಣ, ರಾಮ, ಕೀಚಕಾದಿ ಪಾತ್ರಗಳನ್ನು ನಿರ್ಮಾಣ ಮಾಡಿದ್ದಾರೆ. ಹುಟ್ಟಿನ ಒತ್ತಡಕ್ಕೆ ಸಿಲುಕಿ ಬ್ರಾಹ್ಮಣನ ಶಾಪದಿಂದ ನಲುಗಿದ ಕರ್ಣನ ಕರುಣಾರ್ದ್ರ ಚಿತ್ರ, ಮಹೋನ್ನತ ಧ್ಯೇಯ ಸಾಧನೆಗಾಗಿ ರಾಕ್ಷಸ ವೃತ್ತಿಯನ್ನು ತಳೆದ ಕೃಷ್ಣ, ಆದರ್ಶ ಪ್ರೇಮಕ್ಕಾಗಿ ಸರ್ವಸ್ವವನ್ನೂ ಬಲಿದಾನವಾಗರ್ಪಿಸಿದ ಕೀಚಕ, ಅನುರಾಗ, ಕರ್ತವ್ಯಗಳ ಕತ್ತರಿಯಲ್ಲಿ ಸಿಲುಕಿ ತೊಳಲಿದ ಭೀಷ್ಮ ಕೈಲಾಸಂರ ಕಲಾ ಕುಂದಣದಲ್ಲಿ ಹೊಸರೂಪ, ಭಾವ, ಜೀವ ಹೊತ್ತು ನಿತ್ಯರಾಗಿದ್ದಾರೆ. ವಾಲ್ಮೀಕಿ, ವ್ಯಾಸರ ಅಮರ ಕೃತಿಗಳನ್ನು ತಮ್ಮ ಧರ್ಮ, ವಿಚಾರ ಗಳಿಗನುಗುಣವಾಗಿ ಮಾರ್ಪಡಿಸಿಕೊಂಡು ವಿಚಿತ್ರ ರಾಮಾಯಣ, ಭಾರತ ಗಳನ್ನು ರಚಿಸಿದ ಜೈನ ಕವಿಗಳ ಜಾಡನ್ನು ಕೈಲಾಸಂ ಅನುಸರಿಸಲಿಲ್ಲ. ಹಳೆಯ ಒಡವೆಗಳನ್ನು ಕರಗಿಸಿ ಅದೇ ಚಿನ್ನದಿಂದ ಕಾಲಾನುಗುಣವಾದ ಒಡವೆಗಳನ್ನು ಕೈಲಾಸಂ ಮಾಡಿದರು. ವಾಲ್ಮೀಕಿ, ವ್ಯಾಸರ ಚಿತ್ರ ಗಳಿಗೂ ಕೈಲಾಸಂರ ಚಿತ್ರಗಳಿಗೂ ವ್ಯತ್ಯಾಸವಿದೆ. ಆದರೆ ಕೈಲಾಸಂರ ಚಿತ್ರಗಳನ್ನು ವ್ಯಾಸ, ವಾಲ್ಮೀಕಿಗಳು ಕಂಡರೆ 'ತಾವೂ ಹೀಗೇ ಬರೆದಿದ್ದರೆ ಚೆನ್ನಾಗಿರುತ್ತಿತ್ತಲ್ಲಾ' ಎನ್ನುವರೀತಿ ಸುಧಾರಣೆಯೂ ಆಗಿದೆ. ಇದಕ್ಕೆ ಕೈಲಾಸಂರ ಅಂತರಂಗ ಸಂಸ್ಕಾರ, ಭಾರತ ಸಂಸ್ಕೃತಿಯ ಆಳ ವಾದ ಪರಿಶೀಲನೆಯೇ ಕಾರಣ. ಬೃಹತ್ ಜೀವನವನ್ನು ಬೃಹತ್ತಾಗಿ ಚಿತ್ರಿಸುವ ಪ್ರತಿಭೆಯ ಪ್ರಸಾದ ಕೈಲಾಸಂರಿಗೆ ದೈವದತ್ತವಾಗಿತ್ತು. ಭಾರತ ಸಂಸ್ಕೃತಿಯನ್ನು ರಕ್ಷಿಸುವ ಕಾರ್ಯದಲ್ಲಿ ಕೈಲಾಸಂ ಮಾಡಿದ ಸೇವೆ, ಪಟ್ಟ ಸಾಹಸ ಗಮನಾರ್ಹವಾಗಿವೆ.

ಕಟ್ಟಾ ಪುರಾಣಪ್ರಿಯರಿಗೆ ಕೈಲಾಸಂ ಕೃತಿಗಳು ಕಹಿಯೆನಿಸ ಬಹುದು. ವ್ಯಾಸ, ವಾಲ್ಮೀಕಿಗಳ ಕೃತಿಗಳ ಮೇಲೆ ಸ್ವಾತಂತ್ರ್ಯವಹಿ ಸಲು ಎಷ್ಟು ಎಡೆ ಎಂದು ಅವರು ಕೇಳಿದ್ದಾರೆ. ಭಾಸ ನಮಗಿಂತಲೂ ಸಮೀಪನಾದವನು ವ್ಯಾಸ, ವಾಲ್ಮೀಕಿಗಳಿಗೆ. ಅವನ ಕಾಲ ವಿಜ್ಞಾನ

ಯುಗವಲ್ಲ—ಈಗ್ಗಿಂತಲೂ ಪುರಾಣ ಇತಿಹಾಸಗಳಲ್ಲಿ ಹೆಚ್ಚು ಶ್ರದ್ಧೆ ನಂಬಿಕೆ ಇಟ್ಟಿದ್ದ ಜನ ಅವನ ಸಮಕಾಲೀನರು. ಆದರೂ ಭಾಸ ಕ್ರಾಂತಿಕಾರಕ ಬದಲಾವಣೆಗಳನ್ನು ಮಾಡಿ ಭಾರತ, ರಾಮಾಯಣಗಳ ಮೇಲೆ ತನ್ನ ವಿಶಿಷ್ಟ ದೃಷ್ಟಿ ಚೆಲ್ಲದೆ ಬಿಡಲಿಲ್ಲ. ಕೈಲಾಸಂ ಭಾಸನ ಪರಂಪರೆಗೆ ಸೇರಿದರೂ ಅವನಿಗಿಂತ ಹೆಚ್ಚು ಭಕ್ತಿಯನ್ನು ರಾಮಾಯಣ, ಭಾರತಗಳ ಬಗ್ಗೆ ತಳೆದಿದ್ದರೆನ್ನುವುದಕ್ಕೆ ಸಂಶಯವಿಲ್ಲ.

ಕೈಲಾಸಂ ಪ್ರತಿಭೆಯ ಸೌಧದಲ್ಲಿ ಕಳಶಪ್ರಾಯವಾಗಿ ನಿಲ್ಲುವುದು ಅವರ ಹಾಸ್ಯ ನಿರ್ಮಾಣ ಕೌಶಲ್ಯ. ಭಾರತೀಯ ಸಾಹಿತ್ಯದಲ್ಲಿಯೇ ಹಾಸ್ಯಕ್ಕೆ ಗೌಣಸ್ಥಾನ. ರಾಜ ಶ್ರೀಮಂತರ ಬೇಸರಿಕೆಯನ್ನು ಕಳೆಯಲು ನಿರ್ಮಾಣವಾಗಿದ್ದ ನಿರುಪದ್ರವಿ ಪ್ರಾಣಿ ಹಾಸ್ಯಗಾರ. ಶೂದ್ರಕ, ಕಾಳಿದಾಸ ಇಬ್ಬರೂ ಕವಿಗಳು. ಅವರು ಹಾಸ್ಯಗಾರನ ಮಟ್ಟವನ್ನು ಮೇಲಕ್ಕೆತ್ತಲು ಪ್ರಯತ್ನಿಸಿದರು. ಆದರೆ ತರುವಾಯದ ಕವಿಗಳು ಅವರನ್ನು ಪ್ರಹಸನದ ಮಟ್ಟದಲ್ಲಿಯೇ ಉಳಿಸಿದರು. ಜೀವನವನ್ನು ರುದ್ರನೇತ್ರದಿಂದ ನೋಡುವುದು ಒಂದು ಬಗೆಯಾದರೆ ಪರಿಹಾಸ ನೇತ್ರದಿಂದ ನೋಡುವುದು ಇನ್ನೊಂದು ಬಗೆ. ರುದ್ರ ರೀತಿಯನ್ನು ಭಾಸ, ಭವಭೂತಿ, ವಿಶಾಖದತ್ತ, ಭಟ್ಟ ನಾರಾಯಣ ಅತ್ಯದ್ಭುತವಾಗಿ ಸಾಧಿಸಿದರು. ಆದರೆ ಈ ಪಂಕ್ತಿಯಲ್ಲಿ ಕೂಡಬಲ್ಲ ಒಬ್ಬ ನಗೆಗಾರ ಸಂಸ್ಕೃತ ನಾಟಕ ಸಾಹಿತ್ಯದಲ್ಲಿ ಹುಟ್ಟಿರಲಿಲ್ಲ. ಅರಿಸ್ಟೋಫೇನಸ್, ಷೇಕ್ಸ್‌ಪಿಯರ್, ಮೋಲಿಯರ್ ಇವರ ನೋಟ ಏಕೋ ಏನೋ ನಮ್ಮಲ್ಲಿ ಮೂಡಲಿಲ್ಲ. ಕೈಲಾಸಂರಿಗಾಗಿ ಕಾದು ಕೂತಿತ್ತು ಈ ಸಿಂಹಾಸನ. ಅವರ ನಾಟಕಗಳಲ್ಲಿ ಬಗೆಬಗೆಯ ಹಾಸ್ಯ ವಿಪುಲವಾಗಿ ತುಂಬಿದೆ. ಆದರೆ ನಾಟಕಗಳಲ್ಲಿ ಹಾಸ್ಯ ಬೆರೆಸಬೇಕೆಂದು ಅವರು ಪ್ರಯತ್ನಿಸಲಿಲ್ಲ. ಜೀವನವನ್ನೇ ಹಾಸ್ಯದ ಕಣ್ಣಿಂದ ನೋಡಿ ಅದರ ವಿವೇಕ ಅವಿವೇಕ, ಪ್ರೇಮ ಕಾಮ, ಕಾರುಣ್ಯ ಕಾಠಿಣ್ಯ ಆದ್ಯ ಅನಾದ್ಯ ವಿಷಯಗಳನ್ನು ತೂಗಿ ನೋಡಿದರು. ನಮ್ಮ ಜೀವನದೊಳಗೆ ಹುದುಗಿದ್ದ ಒಂದು ವಿರಾಟ್ ಶಕ್ತಿಯ ಅವಕುಂಠನ ತೆಗೆದು ನಮ್ಮ ಬಾಳಿಗೆ ನಿತ್ಯ ನೂತನವಾದ ಬುನಾದಿಯನ್ನು ಕಲ್ಪಿಸಿಕೊಟ್ಟರು.

ಕೈಲಾಸಂ ಹಾಸ್ಯರೀತಿಗೆ ಅವರ 'ಬಾಪೂ' ಕವಿತೆ ಉತ್ತಮ ಉದಾಹರಣೆ. ಹೊರಗಣ್ಣಿಗೆ ಕಾಣಿಸುತ್ತಿದ್ದುದು ಬಾಪೂ ಅವರ ಒಂದು ಹಿಡಿ ಮೂಳೆ, ಚಕ್ಕಳ, ಮೊರೆ ಕಿವಿಯೆರಡು, ಪಿಳಿ ಪಿಳಿ ಕಣ್ಣು—ಅವರ ಆಹಾರ ಸೋಯಾ ಬೀನ್ಸ್, ಖರ್ಜೂರ, ಮೇಕೆಹಾಲು ಇಂಥ ಅಪೂರ್ಣ ವ್ಯಕ್ತಿ ಏನು ಮಾಡಿಯಾನು! ಇವನೇ ನಮ್ಮ ಲೋಕ ತಾರಕ 'ಬಾಪುವೇ'? ಈ ದೇಹದ ಪೂರಣವಾಗಿ ಮೇಲಿನಂಚಿನವರೆಗೂ ದುಃಖಿಗಳ ಕಣ್ಣೀರು ತುಂಬಿ ಪಕ್ವ ಮಾಡೀ ಇದನ್ನು ಸೆರೆಮನೆ ಯೊಳೊಂದಿನಿತು ವರುಷ ಹೊರತೆಗೆದು; ಪರಿಯ ಪರಿವಾರದಿಂ ಗಮಗಮಿಸಗೊಳಿಸಿ, ಬೆಂದಿಯುಲಿ ಸುತ್ತಿ, ಸೆಳೆ ಬೊಂಬಿನಾಲಂಬವನಿತ್ತು ಬಡಿಸುತಾ! ಅವನೆ ಕಾಣ್! ಲೋಕತಾರಕ! ನಮ್ಮ ಬಾಪೂ! ಹೊರಗಣ್ಣಿಗೆ ಕಾಣುವ ವಿಕೃತಿಯ ಹಿಂದಿರುವ ಪ್ರಕೃತಿಯನ್ನು ನೋಡುವ ಪ್ರತಿಭೆ ಕೈಲಾಸಂ ಅವರದು. ಅವರ ನಾಟಕಗಳಲ್ಲಿ ಬರುವ ಹಿರ ಣ್ಯಯ್ಯ, ಕಿಟ್ಟಿ, ಮಾಧು, ನಾಗತ್ತೆ, ಜಮಾಲಸಾಬಿ, ಕಪ್ಪಣ್ಣ ಇವರೆಲ್ಲರ ಮೇಲೂ ಕೈಲಾಸಂ ತಮ್ಮ ಕ್ಷ–ಕಿರಣ ಪ್ರಯೋಗವನ್ನು ನಡೆಸಿದ್ದಾರೆ. ಅಣಕ, ಕಟಕಿ, ಲಲಿತಹಾಸ್ಯ, ನಗೆ, ವಿಡಂಬನಗಳೆಲ್ಲ ವನ್ನೂ ಧಾರಾಳವಾಗಿ ಬಳಸಿಕೊಂಡಿದ್ದಾರೆ. ವ್ಯಕ್ತಿಯ ಅಂತರಂಗ, ಬಹಿರಂಗಗಳೆರಡನ್ನು ಬಿಚ್ಚಿ ತೋರಿದ್ದಾರೆ. ನಗಿಸಿ ಕೆರಳಿಸುವುದನ್ನು ಮೋಲಿಯರ್ ಸಾಧಿಸಿದ್ದರೆ ಕೆರಳಿಸಿ ನಗಿಸುವುದನ್ನು ಕೈಲಾಸಂ ಸಾಧಿ ಸಿದ್ದಾರೆ.

ಕೈಲಾಸಂ ಅವರ ನಾಟಕಗಳನ್ನು ನೋಡಿ, ಮಾತು ಕೇಳಿ ನಕ್ಕು ನಲಿದು ಆನಂದಿಸಿರುವವರು ಬಹಳ ಮಂದಿ. ಆದರೆ ಅವರನ್ನು ಅರ್ಥ ಮಾಡಿಕೊಂಡಿರುವವರು ಅತಿ ವಿರಳ. ನೇಮಿಚಂದ್ರ ಹೇಳಿದಂತೆ 'ಗಾವಿಲ ಭುವನದ ಭಾಗ್ಯದಿಂಮುಕ್ಕುಂ ಕೃತಿ.' ನಮ್ಮ ಭಾಗ್ಯ ದಿಂದ ಕೈಲಾಸಂ ಹುಟ್ಟಿ ಹತ್ತಾರು ಅಮರ ಕೃತಿಗಳನ್ನು ಪ್ರಸಾದಿಸಿದರು. ಅದರೆ ಅವುಗಳನ್ನು ಅರ್ಥಮಾಡಿಕೊಳ್ಳುವ ಸಂಸ್ಕಾರ ಇನ್ನೂ ನಮಗೆ ದೊರತಿಲ್ಲ. ನಾಡಿನ ಧರ್ಮದೂತನಾಗಿ, ಕಲಾಹರಿಕಾರನಾಗಿ, ಸಂಸ್ಕೃತಿಯ ಪ್ರವಾದಿಯಾಗಿ ಕೈಲಾಸಂ ಕಾಲು ಶತಮಾನಕ್ಕೂ ಮಿಕ್ಕು ದುಡಿದರು.

ಅವರ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುವ ಪರಿಪಾಠ ವನ್ನಾದರೂ ಬೆಳೆಸಿಕೊಳ್ಳೋಣ.

# ಕೈಲಾಸಂ ಚಿತ್ರಿಸಬೇಕೆಂದಿದ್ದ ತ್ರಿಶಂಕು

ಭಾರತೀಯ ಪುರಾಣ ಇತಿಹಾಸಗಳಲ್ಲಿ ಹೇರಳವಾಗಿ ಚಿತ್ತಾಕರ್ಷಕ ಕಥೆಗಳು ದೊರೆಯುತ್ತವೆ. ಅವುಗಳ ಕಲಾವಿನ್ಯಾಸ, ವಿಚಾರ ಪ್ರೌಢಿಮೆ, ತತ್ವ ಜ್ಞಾನಗಳಿಗೆ ದೇಶೀಯರು ಮಾತ್ರವಲ್ಲದೆ ವಿದೇಶೀಯರೂ ಮಾರು ಹೋಗಿದ್ದಾರೆ. ವೇದೋಪನಿಷತ್ತುಗಳ ಅಧ್ಯಾತ್ಮ ತತ್ವಗಳನ್ನು ಜನಸಾಮಾನ್ಯಕ್ಕೆ ಅರುಹಲು ಪುರಾಣ ಇತಿಹಾಸಗಳು ಹುಟ್ಟಿಕೊಂಡವು. ಪ್ರತ್ಯಕ್ ರೂಪಿನಲ್ಲಿದ್ದ ತತ್ವಗಳಿಗೆ ಪರಾಕ್ ರೂಪವನ್ನಿತ್ತು ಸಾಮಾನ್ಯರ ಮಟ್ಟವನ್ನು ಮೇಲಕ್ಕೆತ್ತಬೇಕೆನ್ನುವುದೇ ಅವುಗಳ ರಚಕರ ಉದ್ದೇಶವಾಗಿರಬೇಕು, ಆದರೆ, ಪುರಾಣ ಇತಿಹಾಸಗಳ ಹಿಂದಣ ಭೂಮಿಕೆ ಮರೆಯಾಗುತ್ತ ಜನಗಳ ಅಂಧಶ್ರದ್ಧೆ ಬೆಳೆದು ಅವುಗಳ ಸಾಂಕೇತಿಕ ಸ್ವರೂಪ ನ್ಯಾಯವಾಗುತ್ತ ಬಂತು.

ಪುರಾಣ, ಇತಿಹಾಸಗಳು, ತತ್ವಕ್ಕೆ ರೂಪ ಕಲ್ಪಿಸುವುದು ಮಾತ್ರ ವಲ್ಲ; ಅಪೌರುಷೇಯವಾದ ಗುಣಗಳಿಗೆ ಪುರುಷತ್ವವನ್ನು ಕಲ್ಪಿಸಿ ಜನತೆಯ ನೋಟ ನೆಡುವಂತೆ ಮಾಡಿದವು. ಎಲ್ಲಕ್ಕೂ ಹೆಚ್ಚಾಗಿ ಸಮಕಾಲೀನ ಸಮಾಜಿಕ ಇತಿಹಾಸವನ್ನು ಅವು ಚಿತ್ರಿಸಿದವು. ಧರ್ಮದ ಬಗ್ಗೆ ಅಂಧಶ್ರದ್ಧೆ ಮೂಡಿದಮೇಲೆ ಪುರಾಣ ಇತಿಹಾಸಗಳ ಸಾಮಾಜಿಕ ಸ್ವರೂಪ ಗೌಣವಾಗುತ್ತ ಬಂದಿತು. ಸ್ವಾಮಿ ವಿವೇಕಾನಂದರು ತಿಳಿಸಿರುವಂತೆ

ಕಾಲಕಾಲಕ್ಕೆ ಹುಟ್ಟಿಕೊಂಡ ಪಂಥಗಳು ತಮ್ಮ ವಿಚಾರ ಸರಣಿಗನು ಕೂಲವಾಗಿ ಇವುಗಳನ್ನು ಮಾರ್ಪಡಿಸಿಕೊಂಡು ಗೊಂದಲವನ್ನುಂಟು ಮಾಡಿದವು.

ಹಿಂದೆ ನೋಡುವುದಕ್ಕಿಂತ ಮುಂದೆ ನೋಡುವುದು ಶ್ರೇಯಸ್ಕರ ವೆಂದು ನಂಬುವ ಪ್ರಗತಿಶೀಲರು, ಪುರಾಣ ಇತಿಹಾಸಗಳೆಂದರೆ ಮೂಗು ಮುರಿಯುವುದು ಸಹಜವಾಗಿದೆ. ಆದರೆ ಹಿಂದಿನದರ ತಿಳುವಳಿಕೆಯಿಲ್ಲದೆ ಮುಂದಿನದನ್ನು ಗುರುತಿಸಲಾಗುವುದಿಲ್ಲ. ಇಂದು ನಾಳೆ ಹುಟ್ಟುವ ಎಷ್ಟೋ ಸಮಸ್ಯೆಗಳು ಹಿಂದೆಯೂ ಹುಟ್ಟಿದ್ದವು. ಅವುಗಳು ಪರಿಹಾರ ಹೊಂದಿದ ಬಗೆ ಕೂಡ ನಮಗೆ ಹಲವು ವಿಧದಲ್ಲಿ ನೆರವಾಗುತ್ತವೆ.

ಭಾರತೀಯ ಸಂಸ್ಕೃತಿಯ ಉತ್ಕ್ರಾಂತಿಯ ದೃಷ್ಟಿಯಿಂದಲೂ ನಾವು ಪುರಾಣ ಇತಿಹಾಸಗಳನ್ನು ಕೂಲಂಕಷವಾಗಿ ತಿಳಿಯಬೇಕು. ಅಂದಿನ ಸಂಸ್ಕೃತಿ ಬೇಡವೆಂದರೆ ಅದಕ್ಕೂ ಉತ್ತಮವಾದುದನ್ನು ನಾವು ಕೊಡಬಲ್ಲವೆ? ಪ್ರಾಚೀನ ಸಂಸ್ಕೃತಿಯಮೇಲೆ ಕಟ್ಟಿರುವ ಕಿಲುಬನ್ನು ನಿವಾರಿಸಿದಲ್ಲಿ ಅದು ಇಂದಿಗೂ ಬೆಳಕು ಕೊಡುವ ಶಕ್ತಿ ಪಡೆದಿಲ್ಲವೇ? ಎಂದು ಆಲೋಚಿಸಬೇಕಾದುದು ಪ್ರಗತಿಸಾಧಕರ ಕರ್ತವ್ಯ. ಕೈಲಾಸಂ ಇಂಥ ವಿಚಾರಕ್ಕೆ ತಮ್ಮ ಜೀವಮಾನವನ್ನೇ ಮೀಸಲು ಮಾಡಿದರು. ಪುರಾಣ ಇತಿಹಾಸಗಳ ಗೊಂಡಾರಣ್ಯವನ್ನು ಹೊಕ್ಕಿರಿದು ನಿತ್ಯನೂತನ ತತ್ವಗಳ ಮಹಾ ಬೆಳಕನ್ನು ನೋಡುವ ಕಣ್ಣುಗಳನ್ನು ನಮಗಿತ್ತರು. ವಾಲ್ಮೀಕಿ, ವ್ಯಾಸ, ಪುರಾಣಕಾರರು ನೋಡಿದುದನ್ನು ನೋಡಿದಂತೆ ತಿಳಿಸಿದ್ದು ಮಾತ್ರ ವಲ್ಲ; ಅವರು ನೋಡಬೇಕಾಗಿದ್ದುದನ್ನೂ ತಿಳಿಸಿದರು. ಅವರ ವಿಚಾರದ ಮೂಸೆಯಲ್ಲಿ ಕರಗಿ ಪುರಾಣ ಪುಣ್ಯ ಕಥೆಗಳು ತಮ್ಮ ಕಂದು ಕುಂದುಗಳನ್ನು ನೀಗಿಕೊಂಡು ಪರಿಶುದ್ಧಗೊಂಡಿವೆ. ಕೃಷ್ಣ, ರಾಮ, ಕರ್ಣ, ಭೀಷ್ಮ, ಹರಿಶ್ಚಂದ್ರ, ಪರಶುರಾಮ, ಏಕಲವ್ಯ, ಮಾರ್ಕಂಡೇಯ, ಕೈಲಾಸಂರ ತಪಸ್ಸಿನಿಂದ ಹೊಸ ಹಿರಿಯ ವ್ಯಕ್ತಿಗಳಿಗಾಗಿ ಅವತರಿಸಿದ್ದಾರೆ.

ಇನ್ನೂ ಬಯಲಿಗೆ ಬರದಿರುವ ಕೈಲಾಸಂ ಕಲ್ಪನೆಗಳಲ್ಲಿ 'ತ್ರಿಶಂಕು'ವೂ ಒಂದು. ಅವರ ಬಾವಬಕರಾದ ಶ್ರೀ. ಬಿ. ಎಸ್. ರಾಮರಾಯರ ನಿಷ್ಠೆ

ಯಿಂದ ಅದರ ರೂಪರೇಷೆ ಉಳಿದುಕೊಂಡಿದೆ. ಕೈಲಾಸಂ ಬರೆಯದೆ ಬಿಟ್ಟದ್ದನ್ನು ಶ್ರೀ ರಾಮರಾಯರು ಬರೆದು ಉಪಕಾರ ಮಾಡಬೇಕು.

ತ್ರಿಶಂಕುವಿನ ಕಥೆ ಕೈಲಾಸಂ ಕೈಗೆ ಸಿಕ್ಕಿ ರೂಪುಗೊಂಡುದನ್ನು ತಿಳಿಸುವುದಷ್ಟೇ ನನ್ನ ಉದ್ದೇಶ. ಸೂರ್ಯವಂಶದ ಇಕ್ಷ್ವಾಕು ಕುಲದಲ್ಲಿ ಜನಿಸಿದವನು ಸತ್ಯವ್ರತ. ಒಮ್ಮೆ ಸತ್ಯವ್ರತ ಒಬ್ಬ ವಿವಾಹಿತಕನ್ಯೆಯನ್ನು ಅಪಹರಿಸಿದ ಅಪರಾಧಕ್ಕಾಗಿ ತಂದೆಯಿಂದ ಶಪಿಸಲ್ಪಟ್ಟ. ಮಗನಿಗೆ ಶಾಪವಿತ್ತ ತಂದೆ ರಾಜ್ಯವನ್ನು ತ್ಯಜಿಸಿ, ಪುತ್ರಕಾಮಿಯಾಗಿ ಅರಣ್ಯ ನೇರುತ್ತಾನೆ—ಅರಸಿಲ್ಲದ ರಾಜ್ಯ ಅನಾಯಕವಾಗುತ್ತದೆ—ಅಧರ್ಮ ತಾಂಡವವಾಡುತ್ತದೆ. ರಾಜ್ಯದಲ್ಲಿ ಮಳೆ ಬೆಳೆ ಇಲ್ಲದೆ ಜನ ಹಾಹಾ ಕಾರ ಪಡುತ್ತಾರೆ—ವಿಶ್ವಾಮಿತ್ರನ ಕುಟುಂಬದವರಿಗೂ ಈ ವಾಡು ತಪ್ಪುವುದಿಲ್ಲ. ಸತ್ಯವ್ರತ ಅವರ ಸಂಕಟ ನೋಡಲಾರದೆ ಅವರನ್ನು ರಕ್ಷಿಸುವ ಭಾರ ಹೊರುತ್ತಾನೆ—ತಂದೆ ತನ್ನನ್ನು ಶಪಿಸಿ ರಾಜ್ಯದಿಂದ ಹೊರಡಿಸುವುದಕ್ಕೆ ವಶಿಷ್ಠನೇ ಕಾರಣನೆಂದು ಸತ್ಯವ್ರತನ ನಂಬಿಕೆ—ವಸಿಷ್ಠನನ್ನು ಅಪಮಾನಗೊಳಿಸುವುದಕ್ಕಾಗಿ ಅವನ ಕಡು ವಿರೋಧಿಯಾದ ವಿಶ್ವಾಮಿತ್ರನ ಸಂಸಾರದ ಹೊಣೆಯನ್ನು ಹೊತ್ತುದಲ್ಲದೆ, ವಶಿಷ್ಠನ ಗೋವು ಗಳನ್ನು ಅಪಹರಿಸಿ ಕೊಂದು ಕ್ಷುದ್ಪೀಡಿತ ಜನತೆಗೆ ಬಡಿಸುತ್ತಾನೆ. ವಿವಾಹಿತ ಸ್ತ್ರೀಯನ್ನು ಅಪಹರಿಸಿದುದು ಮೊದಲನೆಯ ಅಪರಾಧ; ಗುರುವಿನ ಹೋಮಧೇನುವನ್ನು ಕೊಂದುದು ಎರಡನೆಯ ಅಪರಾಧ; ಅದನ್ನು ಪ್ರೋಕ್ಷಣಾದಿಗಳಿಂದ ಸಂಸ್ಕಾರ ಮಾಡದೆ ತಿಂದುದು ಮೂರನೆಯ ಅಪರಾಧ—ಈ ಮೂರು ಶಂಕು (ಪಾಪ)ಗಳಿಗಾಗಿ ನೀನು ಪತಿತನಾದೆ, ಎಂದು ವಶಿಷ್ಠ ಸಾರುತ್ತಾನೆ. ಸತ್ಯವ್ರತ ಸಶರೀರಿಯಾಗಿ ಸ್ವರ್ಗಕ್ಕೆ ಹೋಗುವುದಕ್ಕೆ ಒಂದು ಯಜ್ಞಮಾಡಲು ನಿಶ್ಚಯಿಸಿ ವಶಿಷ್ಠ ಮತ್ತು ಅವನ ಮಕ್ಕಳ ಸಹಾಯ ಬೇಡುತ್ತಾನೆ—ಅವರು ಅವನಿಗೆ ಚಂಡಾಲ ತ್ವವನ್ನು ವಿಧಿಸಿ ಶಪಿಸಿ ಕಳುಹಿಸುತ್ತಾರೆ—ಸತ್ಯವ್ರತ ವಿಶ್ವಾಮಿತ್ರನ ಮರೆಹೊಕ್ಕು ಯಜ್ಞವನ್ನಾರಂಭಿಸುತ್ತಾನೆ—ಹವಿರ್ಭಾಗಗಳನ್ನು ಸ್ವೀಕರಿ ಸಲು ದೇವತೆಗಳು ಬಾರದಿರಲು ಕುಪಿತನಾದ ವಿಶ್ವಾಮಿತ್ರ ತನ್ನ ತಪಃ ಪ್ರಭಾವದಿಂದ ಸತ್ಯವ್ರತನನ್ನು ಸ್ವರ್ಗಕ್ಕೆ ಕಳುಹಿಸುತ್ತಾನೆ—ಸ್ವರ್ಗದ

ಬಾಗಿಲಲ್ಲಿ ನಿಂತ ಇಂದ್ರ ಅವನನ್ನು ದೂಡಲು ಅವನು ತಲೆಕೆಳಗಾಗಿ ಭೂಮಿಗೆ ಬೀಳುತ್ತಾ ವಿಶ್ವಾಮಿತ್ರನನ್ನು ಕುರಿತು ಮೊರೆಯಿಡುತ್ತಾನೆ—ವಿಶ್ವಾಮಿತ್ರ ತನ್ನ ತಪೋಮಹಿಮೆಯಿಂದ ಅವನನ್ನು ಮಧ್ಯ ಮಾರ್ಗದಲ್ಲಿ ನಿಲ್ಲಿಸಬೇಕೆಂದು ಸ್ವರ್ಗವನ್ನು ಸೃಷ್ಟಿಸತೊಡಗುತ್ತಾನೆ. ಇಂದ್ರಾದಿ ದೇವತೆಗಳು ಭಯಗ್ರಸ್ತರಾಗಿ ವಿಶ್ವಾಮಿತ್ರನಲ್ಲಿ ಶರಣು ಬರಲು, 'ನಾನು ಕೊಟ್ಟಮಾತಿಗೆ ತಪ್ಪಲಾರೆ. ಸತ್ಯವ್ರತ ಹೊರಗೆ—ಯಜ್ಞಪುರುಷ ಸಂಚರಿಸುವ ಹೊರಭಾಗದಲ್ಲಿ ಧೃವನಕ್ಷತ್ರವಿರುವ ತನಕ ನಿಲ್ಲಲಿ. ನೀವು ಇದಕ್ಕೆ ಒಪ್ಪಿಕೊಳ್ಳಿ' ಎಂದು ಸಮಾಧಾನ ಹೇಳಿ ಕಳುಹಿಸುತ್ತಾನೆ—ಅಂದಿನಿಂದ ಸತ್ಯವ್ರತ ನಿಂತ ಸ್ಥಾನ 'ತ್ರಿಶಂಕುಸ್ವರ್ಗ' ವಾಯಿತು.

ಪುರಾಣೋಕ್ತವಾದ ಈ ತ್ರಿಶಂಕುವಿನ ಕಥೆ, ವಶಿಷ್ಠ ವಿಶ್ವಾಮಿತ್ರ ಇಬ್ಬರಿಗೂ ಕೀರ್ತಿ ತರುವಂತಿಲ್ಲ. ಅಂಧಶ್ರದ್ಧೆಯಿಂದ ಪೀಡಿತನಾಗಿ, ನಿರಪರಾಧಿಗಳನ್ನು ಧರ್ಮದ ಹೆಸರಿನಲ್ಲಿ ಕಾಡುವ ವಶಿಷ್ಠ—ಅವನು ಮಾಡಿದುದಕ್ಕೆ ಪ್ರತಿಯಾಗಿ ಮಾಡುವುದೇ ತನ್ನ ಕರ್ತವ್ಯ ಎಂದು ಬಗೆದಿದ್ದ ಹಟಮಾರಿ ವಿಶ್ವಾಮಿತ್ರ—ಇವರನ್ನು ನಾವು ಕಾಣುತ್ತೇವೆ ಇಬ್ಬರು ಮಹರ್ಷಿಗಳ ದ್ವೇಷಾಸೂಯೆಗಳಿಗೆ ಸಿಕ್ಕಿ ಸತ್ಯವ್ರತ ತೊಳಲಾಡುತ್ತಾನೆ. ಪುರಾಣದ ಕಥೆ ಎರಡು ವ್ಯಕ್ತಿಗಳ ಪ್ರತಿಷ್ಠೆಯ ಹೋರಾಟದ ಕಥೆ. ಕೈಲಾಸಂ, ತಮ್ಮ 'ತ್ರಿಶಂಕು' ವಿನ ಉದ್ದೇಶವನ್ನು ಈ ಮಾತುಗಳಲ್ಲಿ ಹೇಳಿದ್ದಾರೆ :

"ನಾಯಕನ ವಿಕಾಸವನ್ನು ಪ್ರಧಾನವಾಗಿ ವಿವರಿಸಬೇಕೆಂದು ನಾಟಕ ರೂಪದಲ್ಲಿ ಬರೆದ ಚಿತ್ರವಿದು. ಎಂಟು ದಶಕ ಕಾಲ ಸಾಗಿದ ಈ ಕಥೆಯಲ್ಲಿ ಬರುವ ವ್ಯಕ್ತಿಗಳ ಹಾಗೂ ಕಾಲಗುಣದ ಭಾವ ವಾತಾವರಣಗಳನ್ನು ತಾತ್ಪೂರ್ತಿಕವಾಗಿ ಸೆರೆ ಹಿಡಿಯಲಾಗಿದೆ—ಹೆಸರು, ಸ್ಥಳಗಳ ವಿವರಗಳನ್ನು ಮೂಲಕ್ಕನುಗುಣವಾಗಿ ಅನುಸರಿಸಿದ್ದರೂ ವಿಷಯದ ಮಹತ್ವಕ್ಕೆ ಚ್ಯುತಿ ಬಾರದಂತೆ ಯೋಗ್ಯ ಸುಧಾರಣೆಗಳನ್ನು ಮಾಡಲಾಗಿದೆ."

ಅವರ ಕಥೆ ಹೀಗಿದೆ :—ತ್ರಯ್ಯಾರುಣ ಇಕ್ಷ್ವಾಕು ಮಹಾರಾಜನಿಗೆ ಮಕ್ಕಳಿರುವುದಿಲ್ಲ. ಪುತ್ರಸಂತಾನಾರ್ಥವಾಗಿ ಯಜ್ಞ ಮಾಡಬೇಕೆಂದು ರಾಜಗುರು ವಶಿಷ್ಠ ಸೂಚಿಸುತ್ತಾನೆ—ಜನತೆ ಆತುರದಿಂದ ರಾಜ್ಯದ

ಉತ್ತರಾಧಿಕಾರಿಯನ್ನು ನಿರೀಕ್ಷಿಸುತ್ತಿರುತ್ತದೆ. ವಿಶ್ವಾಮಿತ್ರ ಯಜ್ಞ ವ್ಯಾಜ್ಯದಲ್ಲಿ ನಡೆಯುವ ಪ್ರಾಣಿಹತ್ಯೆಯನ್ನು ಖಂಡಿಸುತ್ತಾನೆ. ಅಶ್ವಮೇಧ ಯಾಗವಾಗಲೇಬೇಕೆಂದು ವಶಿಷ್ಠನ ಹಟ. ಹಿಂಸೆಯಿಂದ ದೇವರಿಗೆ ತೃಪ್ತಿಯಾಗುವುದಿಲ್ಲ; ದೇವರ ಕೃಪೆಯನ್ನು ಪ್ರೀತಿಯಿಂದ, ಭಕ್ತಿಯಿಂದ ದೊರಕಿಸಿಕೊಳ್ಳಬೇಕು ಎಂದು ವಿಶ್ವಾಮಿತ್ರನ ವಾದ. ಅರಸು, ಅರಸಿತಿ, ವಿಚಾರ ಮಾಡಿ ಕೊನೆಗೆ ವಿಶ್ವಾಮಿತ್ರನ ವಾದಕ್ಕೆ ಒಪ್ಪಿಗೆಯಿತ್ತು ಅಹಿಂಸಾ ವ್ರತ ಪರಿಪಾಲಕರಾಗುತ್ತಾರೆ.

ಕಾಲಕ್ರಮದಲ್ಲಿ ಅರಸಿತಿ ಗರ್ಭತಳೆದು ಗಂಡು ಮಗುವನ್ನು ಪ್ರಸವಿಸುತ್ತಾಳೆ· 'ಕೆಟ್ಟ ನಕ್ಷತ್ರದಲ್ಲಿ ಹುಟ್ಟಿದ್ದಾನೆ, ಅವನನ್ನು ಒಗೆದುಬಿಡಿ' ಎಂದು ವಶಿಷ್ಠನ ಆಜ್ಞೆ—'ಪ್ರೇಮದ—ಭಕ್ತಿಯ ಕುರುಹಾಗಿ ಹುಟ್ಟಿದ್ದಾನೆ ಅವನು ಸತ್ಯವ್ರತ—ಅವನನ್ನು ರಕ್ಷಿಸಿ ಎಂದು' ವಿಶ್ವಾಮಿತ್ರನ ಸೂಚನೆ. ಕೊನೆಗೆ ವಿಶ್ವಾಮಿತ್ರನ ಮಾತೇಗೆದ್ದು ಅರಸಿತಿ ಮಗುವನ್ನು ಪರಿಪಾಲಿಸುತ್ತಾಳೆ.

ಸತ್ಯವ್ರತನಿಗೆ ೧೦-೧೧ ವಯಸ್ಸು. ತಾಯಿ, ಮಗನಿಗೆ ಸತ್ಯ ಅಹಿಂಸೆಯ ದೀಕ್ಷೆ ಕೊಟ್ಟು ಸತ್ಯವ್ರತನಾಗಿ ಬಾಳಿ ಕೀರ್ತಿತರಬೇಕೆಂದು ಉಪದೇಶಿಸುತ್ತಾಳೆ—ಸತ್ಯವ್ರತನಿಗೆ ಇಪ್ಪತ್ತು ತುಂಬುತ್ತದೆ—ದೃಢಕಾಯನಾಗಿ ಸುಂದರನಾಗಿ ಬೆಳೆದಿದ್ದಾನೆ. ಲೋಕಾನುಭವ ಪಡೆದುಕೊಳ್ಳಲು ಮಿತ್ರ ರಾಷ್ಟ್ರಗಳಿಗೆ ಹೋಗುತ್ತಾನೆ. ಹೀಗೆ ಚೇದಿನಗರಕ್ಕೆ ಬಂದಾಗ ಚೇದಿ ರಾಜಕುಮಾರಿಯಲ್ಲಿ ಅನುರಕ್ತನಾಗಿ ಅವಳೊಂದಿಗೆ ಗಾಂಧರ್ವ ವಿವಾಹ ಮಾಡಿಕೊಳ್ಳುತ್ತಾನೆ.—ಅವನು ರಾಜಧಾನಿಗೆ ಮರಳುವುದೇ ತಡ, ಚೇದಿರಾಜ ತನ್ನ ಮಗಳಿಗೆ ಬೇರೆ ವರನನ್ನು ಗೊತ್ತು ಮಾಡಿ, ಸ್ವಯಂವರದ ನಾಟಕ ಹೂಡಿ ಲಗ್ನಕ್ಕೆ ವ್ಯವಸ್ಥೆ ಮಾಡುತ್ತಾನೆ. ಸತ್ಯವ್ರತನಿಗೆ ಈ ಸುದ್ದಿ ಮುಟ್ಟುತ್ತದೆ—ತನಗಾದ ಅಪಮಾನ ಸಹಿಸದೆ ಅವನು ಸೈನ್ಯ ಬಲದೊಂದಿಗೆ ಹೋಗಿ ವಿವಾಹ ಮಂಟಪದಲ್ಲಿ ರಾಜಕುಮಾರಿಯನ್ನು ಅಪಹರಿಸಿಕೊಂಡು ಬರುತ್ತಾನೆ—ರಾಜಕುಮಾರನ ನಡವಳಿಕೆಯಿಂದ ಅಯೋಧ್ಯಾ ನಗರ ತಲ್ಲಣಗೊಳ್ಳುತ್ತದೆ—ರಾಜಗುರುವಾದ ವಶಿಷ್ಠ ಈ ಅನೀತಿಪರ ನಡವಳಿಕೆಯನ್ನು ಖಂಡಿಸಿ ರಾಜಕುಮಾರನನ್ನು ದೇಶಾಂತರಕ್ಕೆ ಅಟ್ಟಬೇಕೆಂದು ಆಜ್ಞಾಪಿಸುತ್ತಾನೆ.—ಚೇದಿರಾಜಕುಮಾರಿಯನ್ನು ತ್ಯಜಿಸ

ಬೇಕೆಂದು ಸತ್ಯವ್ರತನನ್ನು ಹಿತವರು ಬೇಡುತ್ತಾರೆ—ಅವನು ತನ್ನ ಪ್ರೇಮದ ಹೆಣ್ಣನ್ನು ಯಾವ ಕಾರಣಕ್ಕೂ—ಯಾರಿಗಾಗಿಯೂ—ತ್ಯಜಿಸಲಾರೆನೆಂದು ಖಂಡಿತವಾಗಿ ಹೇಳುತ್ತಾನೆ. ರಾಜಸಭೆಯಲ್ಲಿ ರಾಜಕುಮಾರನ ವಿರುದ್ಧ ನಿರ್ಣಯವಾಗಿ ಅವನು ದೇಶಾಂತರ ಹೊರಡಬೇಕಾಗುತ್ತದೆ—ಮಹಾರಾಣಿ ಮಗನ ವಿಯೋಗ ಸಹಿಸದೆ ಮೃತ್ಯುವಶಳಾಗುತ್ತಾಳೆ.

ಕೂಡಿ ಬಾಳಿದ ಸತಿ, ಕೈಗೆ ಬಂದ ಮಗ, ಇಬ್ಬರನ್ನೂ ಕಳೆದುಕೊಂಡ ಅರಸು ವಶಿಷ್ಠನಿಗೆ ರಾಜ್ಯವನ್ನರ್ಪಿಸಿ ವಾನಪ್ರಸ್ಥಾಶ್ರಮ ಸ್ವೀಕರಿಸಿ ಅರಣ್ಯಾಭಿಮುಖನಾಗುತ್ತಾನೆ.

ದೊರೆಯಿಲ್ಲದ ರಾಜ್ಯ ಅನಾಯಕವಾಗುತ್ತದೆ. ವಶಿಷ್ಠನ ಪ್ರಭಾವ ಪ್ರಾಬಲ್ಯಗಳಿಂದಾಗಿ ಯಜ್ಞಯಾಗಾದಿಗಳು ಅವಿಚ್ಛಿನ್ನವಾಗಿ ನಡೆಯುತ್ತವೆ. ಮಳೆ ಇಲ್ಲದೆ ಬೆಳೆ ಇಲ್ಲದೆ ಜನ ತಪ್ತರಾಗುತ್ತಾರೆ. ರೋಗ ರುಜಿನಾದಿಗಳು ತಲೆದೋರಿ ರಾಜ್ಯವನ್ನು ಸ್ಮಶಾನಸದೃಶ ಮಾಡುತ್ತವೆ.

ರಾಜ್ಯದ ಹೊರವಲಯದಲ್ಲಿ ತಂಗಿದ್ದ ಸತ್ಯವ್ರತನ ಬಳಿಗೆ ಜನ ತಂಡೋಪತಂಡವಾಗಿ ಹೋಗಿ ಮೊರೆಯಿಡುತ್ತಾರೆ. ಚೇದಿ ರಾಜಕುಮಾರಿಯನ್ನು ಬಿಡೆನ್ನುತ್ತಾರೆ. ರಾಜಧಾನಿಗೆ ಮರಳಿ ರಾಜ್ಯಸೂತ್ರ ವಹಿಸಿಕೊಂಡು ಯಜ್ಞಯಾಗಾದಿಗಳ ಮೂಲಕವೇ ದೇವತೆಗಳನ್ನು ತೃಪ್ತಿಗೊಳಿಸಿ ಮಳೆ ಬೆಳೆ ತರಬೇಕೆಂದು ಜನ ಮೊರೆಯಿಡುತ್ತಾರೆ. ಹಿಂಸಾಕರ್ಮದ ಕಡುವಿರೋಧಿಯಾದ ಸತ್ಯವ್ರತ ಅವರ ಪ್ರಾರ್ಥನೆಯನ್ನು ನಿರಾಕರಿಸಿ ಕರ್ಮಶೀಲತ್ವವನ್ನು ಉಪದೇಶಿಸುತ್ತಾನೆ. ಅವರಿಗೆ ಮಾರ್ಗದರ್ಶಕನಾಗಿ ತಾನೇ ನೇಗಿಲಿಗೆ ಕೈ ಹಾಕಿ ಉಳುಮೆಯಾರಂಭಿಸಿ, ಕೆರೆ ಭಾವಿ ತೋಡಿಸಲು ತೊಡಗುತ್ತಾನೆ. ಜನ ಏನೋ ಒಂದು ಆಸೆಯಿಂದ ಅಲ್ಲಿಯೇ ನಿಂತು ಅವನ ಮಾತಿನಂತೆ ನಡೆದುಕೊಳ್ಳುತ್ತಾರೆ—ಆದರೆ ಮಳೆ ಬಂದು, ಬೆಳೆಬರುವ ತನಕ ಆಹಾರಕ್ಕೇನು ಗತಿ ? ಸತ್ಯವ್ರತನ ಪರಿವಾರ ಈಗ ಮೇರೆಮೀರಿ ಬೆಳೆದಿದೆ. ಇಷ್ಟು ಜನಕ್ಕೆ ಆಹಾರ ಒದಗಿಸುವುದು ಹೇಗೆ? ಸತ್ಯವ್ರತನ ಮುಂದಿದ್ದುದು ಒಂದೇ ದಾರಿ—ಬದುಕಲಾಗದೆ, ಸಾಯಲೊಪ್ಪದೆ ಒಣಗಿ ಕಂಗೆಟ್ಟು ನಿಂತಿದ್ದ ದನಗಳನ್ನು ಕೊಂದು ಜನತೆಯನ್ನು ರಕ್ಷಿಸುವುದು. ಆದರೆ ಹಿಂಸೆಯನ್ನು ಖಂಡಿಸಿದವನೇ ಹಿಂಸೆಗೆ ಕೈಯಿಕ್ಕಿದಂತಾಗುವುದಲ್ಲಾ?

ದೊಡ್ಡ ಜೀವ ಉಳಿಸುವುದಕ್ಕೆ ಸಣ್ಣ ಜೀವ ಹೋದರೂ ಚಿಂತೆಯಿಲ್ಲ— ಎಂಬ ನಿರ್ಧಾರ ಮೂಡಿ ಸತ್ಯವ್ರತ ಪ್ರಾಣಿಬಲಿಗೆ ಸಮ್ಮತಿಸುತ್ತಾನೆ— ಜತೆಗೆ ಜನ ಸಾಧುವನ್ನ ಮೃಗಗಳನ್ನೂ, ಧೇನು ಜಿಂಕೆಗಳನ್ನೂ ಬೇಟೆ ಯಾಡಿಕೊಂಡು ತಿನ್ನಲಾರಂಭಿಸುತ್ತಾರೆ—ಜೀವ ಹೊತ್ತು ಬದುಕಿದ್ದೇ ಸಾಕು ಎಂದಿರುತ್ತದೆ ಅವರ ಬಾಳು. ಹಾಗೆಯೇ ವಶಿಷ್ಠನಿಗೆ, ರಾಜ ಧಾನಿಗೆ, ಸೇರಿದ ಪಶುಗಳ ವಧೆಯೂ ಆಗುತ್ತದೆ—ಈ ಸುದ್ದಿ ರಾಜಧಾನಿಗೆಲ್ಲ ಹರಡಿ ಸತ್ಯವ್ರತನಿಗೂ ಅವನ ಪರಿವಾರದವರಿಗೂ 'ಚಂಡಾಲತ್ವ' ವಿಧಾಯಕವಾಗುತ್ತದೆ.

ಅನತಿ ದೂರದಲ್ಲಿ ವಿಶ್ವಾಮಿತ್ರನ ಆಶ್ರಮ. ವಿಶ್ವಾಮಿತ್ರ ಪ್ರವಾಸ ದಲ್ಲಿದ್ದಾನೆ. ಕ್ಷಾಮ ಬಾಧೆ ತಾಳಲಾರದೆ ವಿಶ್ವಾಮಿತ್ರನ ಹೆಂಡತಿ ಹೈಮವತಿ ಕಿರಿಯ ಮಗ ಗಾಲವನನ್ನು ಜೀತಕ್ಕೆ ಮಾರುತ್ತಾಳೆ. ಸತ್ಯ ವ್ರತನಿಗೆ ವಿಷಯ ತಿಳಿದು ತನ್ನ ಹೆಂಡತಿಯ ಮಾಂಗಲ್ಯದಿಂದ ಗಾಲವನನ್ನು ಜೀತದಿಂದ ಬಿಡಿಸಿ ತಂದು ತಾಯಿ ಹೈಮವತಿಗೊಪ್ಪಿಸುತ್ತಾನೆ. ವಿಶ್ವಾ ಮಿತ್ರನ ಕುಟುಂಬ ರಕ್ಷಣೆಯನ್ನೂ ತನ್ನ ಹೆಗಲ ಮೇಲೆ ಹಾಕಿಕೊಳ್ಳುತ್ತಾನೆ. ಜನತೆಯ ಹಸಿವು ಹಿಂಗುವುದಿಲ್ಲ. ಪರಿವಾರವೂ ಬೆಳೆದಿದೆ. ಮುಂದೆ ತಿಂದು ಬದುಕಲು ಮೃಗರಾಶಿಯೂ ಇಲ್ಲ. ಸತ್ಯವ್ರತನಿಗೆ ಇದು ದೊಡ್ಡ ಪರೀಕ್ಷಾಸಮಯ. ಅವನ ದೃಷ್ಟಿ ವಶಿಷ್ಠನ ಆಶ್ರಮದತ್ತ ಹೊರಳುವುದು. ಅಲ್ಲಿಚೆನ್ನಾಗಿ ಬೆಳೆದಿದ್ದ ಕಾಮಧೇನುಗಳಂತಿದ್ದ ದಷ್ಟಪುಷ್ಟ ದನಗಳಿದ್ದವು. ಅವುಗಳನ್ನು ವಶಿಷ್ಠನಿಲ್ಲದಾಗ, ಕೊಂದು ಜನತೆಯ ಕ್ಷುದ್ಬಿಪಾಸೆಯನ್ನಣ ಗಿಸುತ್ತಾನೆ.

ವಶಿಷ್ಠನಿಗೆ ಸತ್ಯವ್ರತನ ವರ್ತನೆ ಗೊತ್ತಾಗಿ, ಅವನು ಆಪಾದ ಮಸ್ತಕ ಕುಪಿತನಾಗಿ ಅವನಲ್ಲಿಗೆ ಬಂದು ಘೋರ ಶಾಪವನ್ನು ಕೊಡುವು ದರಲ್ಲಿರುತ್ತಾನೆ. ವಿಶ್ವಾಮಿತ್ರ ಸಕಾಲಕ್ಕೆ ಧಾವಿಸುತ್ತಾನೆ. ಸತ್ಯವ್ರತನ ದೀನ ವಾತ್ಸಲ್ಯ, ಜೀವಕಾರುಣ್ಯದ ಹಿರಿಮೆ ಅವನಿಗರಿವಾಗುತ್ತದೆ. ತನ್ನ ಸಂಸಾರ ಕಾಪಾಡುವ ಭಾರ ಹೊತ್ತು ಮಗನನ್ನು ದಾಸ್ಯದಿಂದ ಮುಕ್ತಮಾಡಿದ ಮಹಾತ್ಮನಲ್ಲವೇ ಸತ್ಯವ್ರತ. ವಶಿಷ್ಠನ ಎದುರುನಿಂತು ಅವನ ಪ್ರಭಾವಕ್ಕೆ ಸಿಕ್ಕಿದ್ದ ಜನರನ್ನು ತನ್ನ ವಿಚಾರಕ್ಕೆ ಒಳಪಡಿಸಿಕೊಂಡು

ಸತ್ಯವ್ರತನಿಗೆ ರಾಜ್ಯಪ್ರಾಪ್ತಿಯುಂಟಾಗುವಂತೆ ಮಾಡಿ ತಪಸ್ಸಿಗೆ ತೆರಳು ತ್ತಾನೆ—ಸತ್ಯವ್ರತನಿಗೆ ರಾಜ್ಯಪ್ರಾಪ್ತಿಯಾದ ದಿನವೇ ಮಳೆಯಾಗುವುದು. ಜನ ಹಿರಿ ಹಿರಿ ಹಿಗ್ಗುವರು.

ಈ ವೇಳೆಗೆ ಸತ್ಯವ್ರತನಿಗೆ ಒಂದು ಗಂಡು ಮಗು. ಚೇದಿ ರಾಜ ಕುಮಾರಿಗೆ ಸಂತಾನವಾಗದಿರಲು ಆಕೆಯೇ ಪತಿಯನ್ನೊಪ್ಪಿಸಿ ಅವನಿಗೆ ಜನ ಸಾಮಾನ್ಯದ ಹೆಣ್ಣೊಂದನ್ನು ತಂದು ಲಗ್ನ ಮಾಡಿಸಿರುತ್ತಾಳೆ. ಅವಳ ಗರ್ಭದಲ್ಲಿ ಹುಟ್ಟಿದವನೇ ವಿಷ್ಣುವೃದ್ಧ. ಸೇವಾತಪದಲ್ಲಿಯೇ ಹುಟ್ಟಿ ಬೆಳೆದ ವಿಷ್ಣುವೃದ್ಧ ರಾಜಧಾನಿಯಲ್ಲಿರಲು ಒಪ್ಪುವುದಿಲ್ಲ. ಗುರು ವಿಶ್ವಾಮಿತ್ರನನ್ನನುಸರಿಸಿ ಅರಣ್ಯಸೇರಿ ಅಲ್ಲಿ ಜನತಾಸೇವೆಯಲ್ಲಿ ಲೀನ ನಾಗುತ್ತಾನೆ. ರಾಜಕುಮಾರ ಪ್ರಾಪ್ತವಯಸ್ಕನಾಗಲು ಸತ್ಯವ್ರತ ಅವನನ್ನು ಕರೆತಂದು ಪಟ್ಟಕಟ್ಟಲು ಜನತೆಯ ಒಪ್ಪಿಗೆಯನ್ನು ದೊರಕಿ ಸುತ್ತಾನೆ—ಅಂದಿನಿಂದ ಒಂದು ಹೊಸ ಶಾಸನವಾಗುತ್ತದೆ—ರಾಜ ದಂಪ ತಿಗಳಲ್ಲಿ ಜನ್ಮ ಕಳೆದರೂ ಜನತೆಯೊಂದಿಗೆ ಬಾಳಿ ಬದುಕಿ, ಅವರ ಕಷ್ಟ ಸುಖಗಳಲ್ಲಿ ಬೆರೆತವನಿಗೇ ಪಟ್ಟವಾಗಬೇಕೆಂದು. ಜನತೆಯಲ್ಲಿ ಹುಟ್ಟಿದ ರಾಜಕುಮಾರ ವಿಷ್ಣುವೃದ್ಧ ಅವರಿಗಾಗಿಯೇ ಬಾಳಿ ಬದುಕು ತ್ತಾನೆ."

ಪುರಾಣ ಕಥೆಯನ್ನು ಕೈಲಾಸಂ ಅಳವಡಿಸಿಕೊಂಡಿರುವ ರೀತಿ ಅನ್ಯಾದೃಶವಾಗಿದೆ—ವಶಿಷ್ಠ ವಿಶ್ವಾಮಿತ್ರರು ಪ್ರತಿಷ್ಠೆಗಾಗಿ ಇಲ್ಲಿ ಹೋರಾ ಡುವುದಿಲ್ಲ; ಎರಡು ತತ್ತ್ವಗಳಿಗಾಗಿ ಹೋರಾಡುತ್ತಾರೆ. ಸತ್ಯವ್ರತನ ತ್ಯಾಗಜೀವನದ ಹಿರಿಮೆ ಕಂಡ ಕೂಡಲೇ ಅದಕ್ಕೆ ಬಾಗಿ ಅವನನ್ನು ರಾಜ ಸಿಂಹಾಸನದ ಮೇಲೆ ಕೂಡಿಸಲೊಪ್ಪುವ ವಸಿಷ್ಠ, ಅಹಿಂಸಾವ್ರತ ಪಾಲಕ ನಾಗಿ ವಸಿಷ್ಠನಂಥ ಪ್ರಬಲ ವಿರೋಧಿಯನ್ನು ಎದುರಿಸಬಲ್ಲ ಸತ್ಯಜೀವಿ ವಿಶ್ವಾಮಿತ್ರ, ದೀನಸೇವೆಗಾಗಿ ಹುಟ್ಟನ್ನು, ಹಿರಿಮೆಯನ್ನು, ರಾಜ್ಯ ವೈಭವ ವನ್ನು, ತಂದೆತಾಯಿಗಳನ್ನು ಕಳೆದುಕೊಳ್ಳಲು ಸಿದ್ಧನಾದ ಮಹಾತ್ಯಾಗಿ ಸತ್ಯವ್ರತ, ನಮ್ಮ ಕಣ್ಣು ಮುಂದೆ ಮಹಾಮೇರುವಿನಂತೆ ನಿಲ್ಲುತ್ತಾರೆ.

ಕರ್ಮಕ್ಕೆ ಪ್ರಾಧಾನ್ಯಕೊಟ್ಟು ಒಂದು ಪಕ್ಷದ ಸ್ವಾಮ್ಯವನ್ನು ಸ್ಥಾಪಿಸಲು ಹವಣಿಸುತ್ತಿದ್ದ ಸಂಧಿಕಾಲದ ಕಥೆ ತ್ರಿಶಂಕುವಿನದು. ಹುಟ್ಟಿಗೆ

ಬೆಲೆಕೊಡುತ್ತಿದ್ದ ಪಕ್ಷದ ನಾಯಕ ವಶಿಷ್ಠ; ಗುಣಶೀಲಗಳಿಗೆ ಬೆಲೆಕೊಡುತ್ತಿದ್ದವನು ವಿಶ್ವಾಮಿತ್ರ. ಒಬ್ಬ ಸಂಪ್ರದಾಯಪ್ರಿಯ—ಇನ್ನೊಬ್ಬ ಕ್ರಾಂತಿಪ್ರಿಯ. ಒಬ್ಬ ಧರ್ಮಕ್ಕೆ ಮೇರೆ ಕಟ್ಟಲೆತ್ನಿಸುತ್ತಿದ್ದವನು; ಇನ್ನೊಬ್ಬ ಧರ್ಮಕ್ಕೆ ವಿಶ್ವವ್ಯಾಪ್ತಿಯನ್ನು ಕಲ್ಪಿಸುತ್ತಿದ್ದವನು. ಇವರ ಸಂಘರ್ಷಣೆ ನಮ್ಮ ಸಂಸ್ಕೃತಿಯ ಒಂದು ವಿಶಿಷ್ಠ ಕಾಲ, ಪರಿಸ್ಥಿತಿಯ, ಸ್ವರೂಪವನ್ನು ಚಿತ್ರಿಸುತ್ತದೆ—ಕೈಲಾಸಂರ ಕಲ್ಪನೆಯಲ್ಲಿ ಬರುವ ಕ್ಷಾಮದ ಚಿತ್ರ, ದಾಸ್ಯದ ಚಿತ್ರ, ಆ ಕಾಲದ ಸಾಮಾಜಿಕ ಇತಿಹಾಸವನ್ನೂ ಕಣ್ಣಿಗೆ ಕಟ್ಟುತ್ತವೆ.

ಧರ್ಮದ ಬಗ್ಗೆ ಕೈಲಾಸಂ ಆಳವಾಗಿ ಯೋಚಿಸುತ್ತಿದ್ದರು. ಪಕ್ಷ, ಮತ, ವ್ಯಕ್ತಿ, ಸಿದ್ಧಾಂತಗಳನ್ನು ಅನುಸರಿಸಿದ್ದು ಧರ್ಮವೋ–ಮಾನವ ಕಲ್ಯಾಣವನ್ನು ಗುರಿಯಾಗಿಟ್ಟುಕೊಂಡಿರುವುದು ಧರ್ಮವೋ? ಈ ಪ್ರಶ್ನೆಗೆ ಸತ್ಯವ್ರತ, ವಿಶ್ವಾಮಿತ್ರರ ಮೂಲಕ ತಮ್ಮ ಸ್ಪಷ್ಟ ಅಭಿಪ್ರಾಯವನ್ನು ಕೈಲಾಸಂ ಮಂಡಿಸಿದ್ದಾರೆ—ಕೈಲಾಸಂ ಕಂಡ ಈ ಧರ್ಮ, ಜಗತ್ತಿನ ಧರ್ಮವಾದಾಗಲೇ ಅಲ್ಲವೇ ಲೋಕ ಕಲ್ಯಾಣವಾಗುವುದು—ಪಕ್ಷ ವಿಪಕ್ಷಗಳ ಘರ್ಷಣೆ ನಿಲ್ಲುವುದು—ನನ್ನದು ಹೆಚ್ಚು, ನಿನ್ನದು ಕಡಿಮೆ, ಎನ್ನುವ ಭ್ರಾಂತಿ ಅಳಿಯುವುದು.

# ಬಸವಣ್ಣನವರ ದರ್ಶನ

ಹಿಂದೂ ಧರ್ಮದ ವಿವಿಧ ವಿಚಾರವಾಹಿನಿಗಳನ್ನು ಕ್ರೋಢೀಕರಿಸಿ ಪ್ರಾಚೀನ ಭಾರತೀಯರು ಷಡ್ದರ್ಶನ ಸಿದ್ಧಾಂತವನ್ನು ಜಗತ್ತಿನ ಮುಂದಿಟ್ಟರು. ಸ್ವಾಮಿ ವಿವೇಕಾನಂದರು ಹೇಳಿರುವಂತೆ ಜಗತ್ತಿನ ಎಲ್ಲ ಮತಗಳೂ ತತ್ವವಿಚಾರದಲ್ಲಿ ವೈಶೇಷಿಕ, ನ್ಯಾಯ, ವೇದಾಂತ, ಸಾಂಖ್ಯ, ಯೋಗ, ವೇದಗಳಲ್ಲಿ ಯಾವುದಾದರೊಂದನ್ನು ಆಶ್ರಯಿಸಿವೆ. ಪ್ರಾಚೀನ ಮತಗಳಾದ ಶೈವ, ವೈಷ್ಣವ, ಶಾಕ್ತ, ಸೌರ, ಗಾಣಪತ್ಯ, ಸ್ಕಾಂದಗಳೂ ಈ ಪರಿಮಿತಿಯೊಳಗೆ ಅಡಕವಾಗುತ್ತವೆ. ಕಾಲಕಾಲಕ್ಕೆ ನೂತನವಾಗಿ ತಲೆದೋರಿದ ಮತಗಳು ವಿಶಿಷ್ಟರೀತಿಯಲ್ಲಿ ಒಂದೇ ದರ್ಶನಕ್ಕೆ ಬದ್ಧವಾಗದೆ ಹಲವು ದರ್ಶನಗಳ ತತ್ವವಿಚಾರವನ್ನು ಅಳವಡಿಸಿಕೊಂಡು ತಮ್ಮ ವಿಚಾರಧೋರಣೆಯನ್ನು ಬೆಳೆಸಿಕೊಂಡವು. ಅವುಗಳ ವ್ಯಾಪ್ತಿ, ಸಾಮರಸ್ಯ, ಜೀವನಸಾಮೀಪ್ಯಗಳಿಂದ ಅವುಗಳಿಗೆ ದರ್ಶನಗಳೆಂಬ ಹೆಸರೂ ಬಂತು.

ದರ್ಶನ ಶಬ್ದವನ್ನು ತತ್ವವಿಚಾರವೆನ್ನುವ ಅರ್ಥದಲ್ಲಿಟ್ಟುಕೊಂಡ ಮೇಲೆ ಒಂದು ಮಹತ್ವದ ಪ್ರಶ್ನೆ ಉದ್ಭವಿಸುತ್ತದೆ. ತತ್ವವಿಚಾರದ ಗುರಿಯೇನು ? ಮನುಷ್ಯನ ಸುಪ್ತವಾದ ಬುದ್ಧಿಯನ್ನು ಕೆರಳಿಸಿ ಅವನ ಬೃಹತ್ ಚೇತನದ ಅರಿವನ್ನುಂಟುಮಾಡಿಕೊಡುವುದೇ ತತ್ವವಿಚಾರದ ಗುರಿಯೇ ?

ವಾದದಲ್ಲಿ, ಬುದ್ಧಿಯ ಪ್ರಖರಪ್ರಭಾವದಲ್ಲಿ ಮಾನವನ ಗತಿಯೇನಾಗುತ್ತದೆ? ಬಾಳನ್ನು ವಿಂಗಡಿಸುತ್ತ ಹೋದಂತೆ ಅವನಿಗೆ ನೆಲೆ ದೊರೆಯುವುದೇ ?

ಬಸವಣ್ಣನವರ ದರ್ಶನ ಈ ಸಮಸ್ಯೆಯನ್ನು ಬಿಡಿಸಲೆತ್ನಿಸಿದೆ. ಪ್ರೇಮದಿಂದ ಪ್ರೇರಿತವಾಗಿ, ಜ್ಞಾನದಿಂದ ಪುಟಗೊಂಡ ಬಾಳುವೆಯೇ ಬಾಳುವೆ ಎಂದು—ಬರ್ಟ್ರೆಂಡ್ ರಸಲ್ ಹೇಳಿದ ಮಾತು, ಬಸವಣ್ಣನವರ ಜೀವನ, ಉಪದೇಶ ಎರಡಕ್ಕೂ ಅನ್ವಯಿಸುತ್ತದೆ. ಭಕ್ತಿ, ಜ್ಞಾನ, ವೈರಾಗ್ಯಗಳ ತ್ರಿವೇಣೀ ಸಂಗಮ ಮಾನವನ ಅಂತರಂಗದಲ್ಲಾಗಬೇಕು. ಬಸವಣ್ಣನವರು ಜ್ಞಾನ ವೈರಾಗ್ಯಗಳ ಮಹತ್ವವನ್ನು ಅಲ್ಲಗಳೆಯಲಿಲ್ಲವಾದರೂ, ಭಕ್ತಿಗೆ ಕೊಟ್ಟ ಪ್ರಾಧಾನ್ಯವನ್ನು ಅವುಗಳಿಗೆ ಕೊಡಲಿಲ್ಲ. 'ನಾದಪ್ರಿಯನೂ ಅಲ್ಲ- ವೇದಪ್ರಿಯನೂ ಅಲ್ಲ- ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವ.'

ಭಕ್ತಿ ಜ್ಞಾನದಂತೆ ವಿಚಾರದ ಮರಳುಗಾಡಿನಲ್ಲಿ ಸಾಧಕನನ್ನೊಯ್ದು ಅವನು ದಾರಿಗಾಣದಂತೆ ಮಾಡುವುದಿಲ್ಲ. ಸಾಮರಸ್ಯವೇ ಅದರ ಜೀವ ಜೀವಾಳ. ಜೀವಾತ್ಮ ತನ್ನ ಕಾಯದ ಕಸರನ್ನು ಮನಸ್ಸಿನ ಮಲಿನವನ್ನು ಕಳೆದುಕೊಂಡು ಪರಮಾತ್ಮನಲ್ಲಿ ಧಾವಿಸುವ ಭಕ್ತಿಯೇ ಪರಮ ಮಾರ್ಗ. 'ಭಕ್ತಿಯ ಕುಳಸ್ಥಳವನು ಮರ್ತ್ಯಲೋಕದಲ್ಲಿ ಹರಹಲೆಂದು ಬಂದನಯ್ಯ ಬಸವಣ್ಣನು' ಎಂದು ಚೆನ್ನಬಸವಣ್ಣ ಬಣ್ಣಿಸಿದ್ದಾನೆ. 'ಬಸವಣ್ಣನ ಭಕ್ತಿ, ಓಜೆಯೋಜೆ' ಎಂದು ಹರಿಹರ ಹಾಡುತ್ತಾನೆ—ಭಕ್ತಿಭಾಂಡಾರಿ ಎಂಬುದು ಬಸವಣ್ಣನವರ ವಿಷಯದಲ್ಲಿ ಕೇವಲ ಗುಣವಾಚಕವಾಗಿರಲಿಲ್ಲ.—ಅದು ಅನ್ವರ್ಥನಾಮವಾಗಿತ್ತು. ಮಲ್ಲಿಗೆ ಮಾಲೆ ಕಟ್ಟುವ ಮಾಲೆಗಾತಿ ಮಲ್ಲಿಗೆಯ ಪ್ರಾಧಾನ್ಯಕ್ಕೆ ಕುಂದುಬರದಂತೆ ಅಲ್ಲಿ ಇಲ್ಲಿ ಒಂದೊಂದು ಮರುಗ, ಪಚ್ಚೆತೆನೆ, ಗುಲಾಬಿಯನ್ನಿಟ್ಟುಕೊಂಡು ಹೋಗುವಂತೆ ಬಸವಣ್ಣನವರು ಭಕ್ತಿಮಾಲೆಗೆ, ಜ್ಞಾನ, ವೈರಾಗ್ಯ, ಯೋಗವನ್ನು ಅಳವಡಿಸಿದರು.

ಭಕ್ತಿ ಆಚರಣೆಗೆ ಸುಲಭವೆಂದು ಬಸವಣ್ಣನವರು ಭಾವಿಸಲಿಲ್ಲ. 'ಭಕ್ತಿಯೆಂಬುದ ಮಾಡಬಾರದು. ಕರಗಸದಂತೆ ಹೋಗುತ್ತ ಕೊಯ್ವುದು ಬರುತ್ತ ಕೊಯ್ವುದು, ಘಟಸರ್ಪದಲ್ಲಿ ಕೈದುಡುಕಿದರೆ, ಹಿಡಿವುದು ಮಾಬುದೇ' ಎಂದು ಎಚ್ಚರಿಸುತ್ತಾರೆ. ತಮ್ಮ ಅನುಭವವನ್ನು ನಿವೇದಿಸುತ್ತ, 'ನೆತ್ತಿಯಲ್ಲಿ ಅಲಗು ತಿರುಹುವಂತಪ್ಪ ವೇದನೆಯಹುದೆನಗೆ, ಕೊಯ್ದು

ಮೂಗಿಂಗೆ ಕನ್ನಡಿಯು ತೋರುವಂತಪ್ಪ ವೇದನೆಯಹುದೆನಗೆ ಬೆಂದ ಹುಣ್ಣು ಕಂಬಿಯಲ್ಲಿ ಕೀಸುವಂತಪ್ಪ ವೇದನೆಯಹುದೆನಗೆ.' ಎಂದು ವರ್ಣಿಸಿದ್ದಾರೆ.

ಭಕ್ತಾವಸ್ಥೆಯಲ್ಲಿ ತೋರುವ ನಿರ್ವಿಕಲ್ಪ, ತದೇಕಚಿತ್ತ, ಆತ್ಮಾರ್ಪಣೆಯಿಂದ ಸಾಧಕ ತನ್ನ ಗುರಿಯನ್ನು ಮುಟ್ಟಲು ಹೆಚ್ಚು ಸಾಧ್ಯವೆಂಬುದು ಅವರ ಮತವಾಗಿತ್ತು.

ಭಕ್ತಿಯೋಗಾನುಷ್ಠಾನಕ್ಕೆ ಗುರುಕರುಣೆ, ಜಂಗಮಕಟಾಕ್ಷ ಅತ್ಯವಶ್ಯಕ.

" ಮಡಕೆಯ ಮಾಡುವರೆ ಮಣ್ಣೇ ಮೊದಲು
ತೊಡಿಗೆಯ ಮಾಡುವರೆ ಹೊನ್ನೇ ಮೊದಲು.
ಶಿವಪಥವನರಿವಡೆ ಗುರುಪಥವೇ ಮೊದಲು
ಕೂಡಲಸಂಗಮದೇವನರಿವುದಕ್ಕೆ, ಶರಣರ ಸಂಗವೇ ಮೊದಲು."

" ಗುರುವಚನದಿಂದಲ್ಲದೆ ಲಿಂಗವೆಂದೆನಿಸದು
ಗುರುವಚನದಿಂದಲ್ಲದೆ ನಿತ್ಯವೆಂದೆನಿಸದು
ಗುರುವಚನದಿಂದಲ್ಲದೆ ನೇಮವೆಂದೆನಿಸದು
ತಲೆಯಿಲ್ಲದಟ್ಟೆಗೆ ಪಟ್ಟವಕಟ್ಟುವ ಉಭಯಭ್ರಷ್ಟರ ಮೆಚ್ಚುವನೇ ನಮ್ಮ ಕೂಡಲಸಂಗಮದೇವ."

ಬಸವಣ್ಣನವರ ದರ್ಶನದಲ್ಲಿ ಗುರುವಿನ ಸ್ಥಾನ ಅಭೂತಪೂರ್ವವಾದುದು. ಅವನು ದೇವರಿಗಿಂತ ದೊಡ್ಡವನು. ದೇವರನ್ನು ಮರೆತರೂ ಚಿಂತೆಯಿಲ್ಲ, ಗುರುವನ್ನು ಮರೆಯಲಾಗದು. ಗುರುವಿಗೆ ಸರ್ವಸ್ವವನ್ನು ಅರ್ಪಿಸಿ ಅವನ ಒಲವನ್ನು ದೊರೆಕಿಸಿಕೊಳ್ಳಬೇಕು.

ಗುರು ದೊಡ್ಡವನೆಂದು ವೇದ ವೇದಾಂತಗಳೂ ಸಾರಿದವು. ಗುರುವೇ ಬ್ರಹ್ಮ, ವಿಷ್ಣು, ಮಹೇಶ್ವರ–ಅವನೇ ಸಾಕ್ಷಾತ್ ಪರಬ್ರಹ್ಮ. ನಿಜದ ತಿರುಳನ್ನು ತಿಳುಹಲು ಅವನೇ ಸಮರ್ಥ. ಮಾನವನ್ನ ಅಂತಿಮ ಶಾಂತಿಯನ್ನು ದೊರಕಿಸಲು ಅವನಿಂದಲೇ ಸಾಧ್ಯ ಎಂದು ಹೇಳಿದವು. ಆದರೆ ಉಪನಿಷತ್ತು ಒಂದು ಎಲ್ಲೆಕಟ್ಟನ್ನು ಸೂಚಿಸಿತು. ಗುರು ಮಾರ್ಗದರ್ಶಕನಾಗಬಲ್ಲನೇ ವಿನಾ ಅವನೇ ಅಂತಿಮಶಾಂತಿಯನ್ನು ಒಂದು ತುತ್ತು

ಮಾಡಿ ಸಾಧಕನ ಬಾಯಿಗೆ ಹಾಕಲಾರ. ಗುರು ಹೇಳುವುದನ್ನೆಲ್ಲಾ ಹೇಳಿ ಮುಂದಿನದನ್ನು ನೀನು ನಿನ್ನ ಅನುಭವದಿಂದ ಕಂಡುಕೊಳ್ಳಬೇಕು ಎಂದು ತಿಳಿಸುತ್ತಾನೆ. ಬಸವಣ್ಣನವರು ಈ ಮಿತಿಯನ್ನು ಒಪ್ಪುವುದಿಲ್ಲ. ಗುರು ಮಾಡಲಾಗದ ಕೆಲಸವೇ ಇಲ್ಲ ಎಂದು ಅವರ ದೃಢ ನಂಬಿಕೆ.

ಗುರು–ಶಿಷ್ಯರು ಪರಸ್ಪರ ಪರೀಕ್ಷೆಗೊಳಗಾಗದೆ ಕೂಡಬಾರದು, ತನ್ನ ಉಪದೇಶಕ್ಕೆ ಶಿಷ್ಯ ಅರ್ಹನೋ ಅಲ್ಲವೋ ಎಂಬುದನ್ನು ಗುರು ಖಚಿತ ಮಾಡಿಕೊಳ್ಳಬೇಕು. ಹಾಗೇ ಶಿಷ್ಯನೂ ಗುರುವಿನ ಮಹತ್ವವನ್ನು ಒರೆದು ನೋಡಿ ನಿಶ್ಚಯಿಸಿಕೊಳ್ಳಬೇಕು ಎಂದು ಉಪನಿಷತ್ತು ಸೂಚಿಸುತ್ತದೆ. ಬಸವಣ್ಣನವರು ಆ ಸ್ವಾತಂತ್ರ್ಯವನ್ನು ಶಿಷ್ಯನಿಗೆ ಕೊಡಲು ಸಿದ್ಧರಾಗಿಲ್ಲ. ಗುರು ಹೇಗೇ ಇರಲಿ—ಎಂಥವನೇ ಇರಲಿ— ಅವನ ಕುಲ, ಗೋತ್ರ, ಗುಣ —ಶೀಲಗಳನ್ನು ಪರೀಕ್ಷಿಸುವ ಗೋಜಿಗೆ ಶಿಷ್ಯ ಹೋಗಬಾರದೆಂದು ಅವರ ಮತ.

“ ಉತ್ತಮ, ಮಧ್ಯಮ ಕನಿಷ್ಠವೆಂದು ಬಂದ ಜಂಗಮವನೆಂದೆನಾದರೆ
ನೊಂದೆನಯ್ಯ, ನಾನು ಬೆಂದೆನಯ್ಯ,
ಎನ್ನಕಿಚ್ಚು ಎನ್ನ ಸುಟ್ಟಿತು
ಸುಖಿ ಜಂಗಮ, ಸಾಮಾನ್ಯ ಜಂಗಮ ಉಂಟೇ ಕೂಡಲ
ಸಂಗಮ ದೇವಾ ?”

ಗುರುವಿಗೆ ಕೊಡುವ ಮಹತ್ವವನ್ನೇ ಜಂಗಮ, ಶರಣ, ಭಕ್ತರಿಗೂ ಬಸವಣ್ಣನವರು ಕೊಡುತ್ತಾರೆ. ಲಿಂಗಾಂಗಿಯಾದರೆ ಸಾಕು, ಅವನನ್ನು ಪ್ರತ್ಯಕ್ಷ ಪರಮೇಶ್ವರ ಎಂದು ಭಾವಿಸಬೇಕು.

“ಎಡದ ಕೈಯಲಿ ಕತ್ತಿ, ಬಲದ ಕೈಯಲಿ ಮಾಂಸ,
ಬಾಯಲ್ಲಿ ಸುರೆಯ ಗಡಿಗೆ, ಕೊರಳಲ್ಲಿ ದೇವರಿರಲಿ,
ಅವರ ಲಿಂಗವೆಂಬೆ, ಸಂಗನೆಂಬೆ
ಕೂಡಲ ಸಂಗಮದೇವ ಅವರ ಮುಖಲಿಂಗಿಗಳೆಂಬೆ”

ಶರಣರ ಗುಣಪರೀಕ್ಷೆ ಮಾಡುವುದು ಅನುಚಿತ.

“ ತೊತ್ತಿಂಗೆ ಲಕ್ಷಣವೇಕಯ್ಯ ?

ಅವರೊಕ್ಕುದನುಂಡು, ಮಿಕ್ಕುದ ಕಾಯ್ದು ಕೊಂಡಿಪ್ಪುದು
ಸರಿ ಹೊರಸೇಕೆ? ಅವಳಿಗೆ ಮಾರುತ್ತರವೇಕೆ?
ಕೂಡಲ ಸಂಗನ ಶರಣರೊಡನೆ ಇದಿರುತ್ತರವೇಕೆ ಸಿಂಬಕಂಗೆ?"

ಲಿಂಗಲಾಂಛನ ತಳೆದುಬಂದರೆ ಸಾಕು. ಅವರು ಬಸವಣ್ಣನವರಿಗೆ ಪೂಜಾರ್ಹರು.

"ಲಾಂಛನವ ಕಂಡು ನಂಬುವೆ.
ಅವರಂತರಂಗವ ನೀನೇ ಬಲ್ಲೆ.
ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿಯೇಕಯ್ಯ?
ರತ್ನ ಮೌಕ್ತಿಕದಚ್ಚು, ಕೂಡಲ ಸಂಗಮದೇವಾ ನಿಮ್ಮ ಶರಣರು."

ಈ ದೃಷ್ಟಿಯನ್ನು ಸಮಕಾಲೀನರೂ, ಬಸವಣ್ಣನವರ ಗುರುಸ್ಥಾನದಲ್ಲಿದ್ದವರೂ ಆದ ಪ್ರಭುದೇವರು ಒಪ್ಪಿದಂತೆ ಕಂಡುಬರುವುದಿಲ್ಲ. ಗುರು, ಲಿಂಗ, ಜಂಗಮ ಕೇವಲ ನಾಮಮಾತ್ರ ಗುರುಲಿಂಗ ಜಂಗಮವಾಗಿದ್ದರೆ ಸಾಲದು. ಅವರಲ್ಲಿ ಘನತೆಯಿರಬೇಕು.

"ಜಂಗಮ ಘನವೆಂಬೆನೆ, ಬೇಡಿ ಕಿರಿದಾಯ್ತು.
ಲಿಂಗ ಘನವೆಂಬೆನೆ? ಕಲ್ಲು ಕುಟಿಗನ ಕೈಲಿ
ಮಾಡಿಸಿಕೊಂಡು ಕಿರಿದಾಯ್ತು.
ಭಕ್ತ ಘನವೆಂಬೆನೆ? ತನು ಮನ ಧನದಲ್ಲಿ
ವಂಚಕನಾಗಿ ಕಿರಿದಾಯ್ತು.
ಇಂತು ತ್ರಿವಿಧದಲ್ಲಿ ಪರಿಣಾಮವಿಲ್ಲ, ಪರಮಾರ್ಥವಿಲ್ಲ.
ಘನದ ಬಲ್ಲವರಾರೊ ಗುಹೇಶ್ವರಾ."

ಲಾಂಛನಧಾರಿಗಳನ್ನು ಕಂಡು ಪ್ರಭುದೇವರು

"ತನು ಬತ್ತಲೆ ಇದ್ದಡೇನು, ಮನ ಶುಚಿಯಾಗದನ್ನಕ್ಕರ.
ಮಂಡೆ ಬೋಳಾದೊಡೇನು, ಭಾವ ಬಯಲಾಗದನ್ನಕ್ಕರ.
ಭಸ್ಮವ ಪೂಸಿದೊಡೇನು, ಕರುಣಾದಿ ಗುಣಂಗಳನ್ನೊತ್ತಿ.
ಮೆಟ್ಟಿ ಸುಡದನ್ನಕ್ಕರ.

ಇಂತೀ ಆಶೆಯ ವೇಶದ ಭಾಷೆಗೆ ನೀ ಸಾಕ್ಷಿಯಾಗಿ
ಛೀಯೆಂದು ಕಳೆಯುವೆನು ಗುಹೇಶ್ವರಾ."

ತಾವು ಯಾರನ್ನು ಶರಣರೆಂದು ಮಾನಿಸುವರೆಂಬುದನ್ನು ಪ್ರಭುದೇವರು ಸ್ಪಷ್ಟಪಡಿಸಿದ್ದಾರೆ.

" ನಿಜವನರಿದ ನಿಶ್ಚಿಂತನೆ,
ಮರಣಗೆಲಿದ ಮಹಿಮನೆ,
ಘನಕಂಡ ಮಹಂತನೆ,
ಪರವನೊಳಗೊಂಡ ಪರಿಣಾಮಿಯೆ,
ಬಯಲ ಒದಗಿದ ಭರಿತನೆ.
ಗುಹೇಶ್ವರಲಿಂಗ ನಿರಾಳವನೊಳಗೊಂಡ ಸಹಜನೆ. "

ಭಕ್ತಿಯ ಪರಮಾಧಿಕ್ಯದಲ್ಲಿ ಬಸವಣ್ಣನವರು ವಿವೇಚನೆಯನ್ನು ಗೌಣವಾಗಿ ಎಣಿಸುತ್ತಾರೆ. ನಾನು— ನನ್ನದು ಎನ್ನುವ ಮಮಕಾರ ಸಾಧಕನಿಂದ ಪೂರ್ಣವಾಗಿ ತೊಲಗಬೇಕು. ಶಿವಚಿಂತನೆಯಲ್ಲಿ ಅವನ ಅಂತಃಕರಣ ಲೀನವಾಗಬೇಕು. ಹಾಗೆ ಶಿವಚಿಂತನೆ ಮಾಡುವವರನ್ನು ಅವನು ಸರ್ವ ವಿಧದಲ್ಲಿಯೂ ಗೌರವಿಸಿ, ತೃಪ್ತಿಪಡಿಸಬೇಕು. ಅವರ ವೇಷ, ಭೂಷಣ, ಹಾವ, ಭಾವ, ಆಚಾರ ವಿಚಾರಗಳನ್ನು ಸಾಧಕ ಲಕ್ಷಿಸಬಾರದು. ಇದರಿಂದ ಶ್ರದ್ಧೆ ಬೆಳೆಯುವುದಕ್ಕೆ ಮಾರ್ಗವಾಯಿತು ಸಾಧಕ ಶಿವಚಿಂತನೆಗೆ ಮನವನೀಡುವಂತಾಯಿತು. ಆದರೆ ಶ್ರದ್ಧೆಯ ಜತೆ, ಅಂಧಶ್ರದ್ಧೆಯೂ ಬಂತು. ಶಿವ ಚಿಂತನೆಯ ಜತೆ ಕಟುಧರ್ಮವೂ ಬಲಿಯಿತು. ಶಿವ ಭಕ್ತನಂತೆಯೇ ಸಾಧಕನೂ, ಪವಿತ್ರಾತ್ಮನೂ, ಆತ್ಮವಿಚಾರಿಯೂ ಆದ ಇತರ ಮತದವರ ಮಹತ್ವ ಅನಿವಾರ್ಯವಾಗಿ ಗಣನೆಗೆ ಬಾರದೆಹೋಗುತ್ತದೆ. ಬಸವಣ್ಣನವರಷ್ಟು ಭಾವಸಿದ್ಧಿ ಪಡೆಯದ ಸಾಮಾನ್ಯಜನ ಅವರ ಮಾತಿಗೆ ಅಪಾರ್ಥ ಕಲ್ಪಿಸಿ, ಶಿವಚಿಂತನೆಗಿಂತ ಪರಮತ ತಿರಸ್ಕಾರದಲ್ಲಿ ಮನ ನೆಡುವುದಕ್ಕೆ ಅವಕಾಶವಾಯಿತು.

ಜ್ಞಾನದ ಆವಶ್ಯಕತೆಯನ್ನು ಬಸವಣ್ಣನವರು ಗಮನಿಸದೆ ಹೋಗಲಿಲ್ಲ. " ಅರಿದರೆ ಶರಣನು ; ಮರೆದರೆ ಮಾನವ. "

" ನೆಲನೊಂದೇ ಹೊಲಗೇರಿ ಶಿವಾಲಯಕ್ಕೆ.
ಜಲ ಒಂದೇ ಶೌಚಾಚಮನಕ್ಕೆ.
ಕುಲ ಒಂದೇ ತನ್ನ ತಾನರಿದವಂಗೆ.
ಫಲ ಒಂದೇ ಷಡುದರ್ಶನ ಮುಕ್ತಿಗೆ.
ನಿಲವೊಂದೇ ಕೂಡಲ ಸಂಗಮದೇವ ನಿಮ್ಮನರಿದವಂಗೆ. "

ಈ ಕಾರಣಗಳಿಂದ ಬಸವಣ್ಣನವರ ದರ್ಶನ ವೈದಿಕ ದರ್ಶನದ ವಿರುದ್ಧವಾದುದೆಂಬ ಭಾವನೆ ಬೆಳೆಯಿತು. ವೇದಪುರಾಣಗಳನ್ನು ಬಸವಣ್ಣನವರು ಅಲ್ಲಗಳೆದಿರುವುದೂ ಈ ಭಾವನೆಗೆ ಇಂಬುಗೊಟ್ಟಿತು. ಆದರೆ ಬಸವಣ್ಣನವರು ನೋಡುತ್ತಿದ್ದುದು ವೇದದ ಕರ್ಮಕಾಂಡ. ಜೀವದಯಾ ಕಾರುಣ್ಯಕ್ಕೆ ಮಾರುಹೋಗಿದ್ದ ಬಸವಣ್ಣನವರ ಕೋಮಲಾಂತಃಕರಣ, ವೇದದ ಯಜ್ಞಯಾಗಾದಿಗಳನ್ನು ಕಂಡು, ಪುಣ್ಯ ಪಾಪಕಲ್ಪನೆಯನ್ನು ಕಂಡು, ಸಿಡಿಮಿಡಿಗೊಂಡಿತು. ಆದರೆ ವೇದಾಂತದ ಜ್ಞಾನವೈಭವಕ್ಕೆ ಬಸವಣ್ಣನವರು ಮನಸೋತಿದ್ದರು. ಅವರ ನಡೆನುಡಿಯಲ್ಲಿ ಅದರ ಚೇತನ ಮೂರ್ತೀಭವಿಸಿತು. ಉಪನಿಷತ್ತಿನ ಮಹೋನ್ನತ ವಿಚಾರಗಳನ್ನು ಬಸವಣ್ಣನವರು ತಮ್ಮ ವಚನಗಳಲ್ಲಿ ಧಾರಾಳವಾಗಿ ಬಳಸಿಕೊಂಡರು.

" ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದರೆ ಕಿವಿ ಮೂಗ ಕೊಯ್ವನು
ಹಲವು ದೈವದ ಎಂಜಲ ತಿಂಬುವರೇನೆಂಬೆ
ಕೂಡಲ ಸಂಗಮದೇವ."

"[ಏಕಂ ಸತ್ ವಿಪ್ರಾ ಬಹುದಾ ವದಂತಿ.]"

" ಲಿಂಗವ ಪೂಜಿಸಿ ಫಲವೇನಯ್ಯ ?
ಸಮರತಿ ಸಮಸುಖವನರಿಯದನಕ್ಕ ?
ಕೂಡಲ ಸಂಗಮದೇವರ ಪೂಜಿಸಿ ನದಿಯೊಳಗೆ
ನದಿ ಬೆರಸಿದಂತಾಗದನ್ನಕ್ಕ "

[ಯಥಾ ನದ್ಯಸ್ಯಂದಮಾನಾಃ ಸಮುದ್ರೇ
ಅಸ್ತಮ್ ಗಚ್ಛಂತಿ ನಾಮರೂಪೇ ವಿಹಾಯ|
ತಥಾ ವಿದ್ವಾನ್ ನಾಮರೂಪಾದ್ವಿಮುಕ್ತಃ ಪರಾತ್ಪರಮ್
ಪುರುಷ ಮುಪೈತಿ ದಿವ್ಯಮ್ ||—ಮುಂಡಕ]
"ಹಿರಿದಕ್ಕೆ ಹಿರಿದು ಕಿರಿದಕ್ಕೆ ಕಿರಿದು,
ವಾಙ್ಮನಕ್ಕಗೋಚರ ಕೂಡಲಸಂಗಮದೇವಾ."
[ಅಣೋರಣೀಯಾನ್ ಮಹತೋಮಹೀಯಾನ್— ಕಠ]

ವೇದೋಪನಿಷತ್ತುಗಳ ಘನತೆಯನ್ನು ಬಸವಣ್ಣನವರು ಬಲ್ಲಿದರಾಗಿದ್ದರು. ಆದರೆ ವೇದೋಪನಿಷತ್ತುಗಳಿಗೆ ಅಪಾರ್ಥಕಲ್ಪನೆಮಾಡಿ ಅವುಗಳ ಗುತ್ತಿಗೆ ಹಿಡಿದು ಸಾಮಾನ್ಯ ಜನತೆಯನ್ನು ಸುಲಿಯುತ್ತಿದ್ದ ವರ್ಗದಮೇಲೆ ಅವರು ತಮ್ಮ ಆಗ್ರಹವನ್ನು ವ್ಯಕ್ತಪಡಿಸಿದರು.

ಅಧ್ಯಾತ್ಮ ವಿಚಾರಿಯಾಗುವುದಕ್ಕೆ ಮೊದಲು ಮಾನವ ಶೀಲವಂತನಾಗಬೇಕು. ತ್ಯಾಗ, ಅಹಿಂಸೆ, ಸಂಯಮ ಶ್ರದ್ಧಾದಿಗುಣಗಳು ಅವನಲ್ಲಿ ನೆಲಸಬೇಕು. ಇಂದು ಇಲ್ಲಿ ಏನು ಮಾಡಿದರೂ ಚಿಂತೆಯಿಲ್ಲ— ನಾಳೆ ಕೈಲಾಸದಲ್ಲಿ ಪಟ್ಟ ಗಟ್ಟಿಯಾದರೆ ನಾಕು ಎಂಬ ವಾದ ಹೊಲ್ಲ. ದೇವಲೋಕ, ಮರ್ತ್ಯಲೋಕ ಎಲ್ಲೋ ಬೇರೆ ಇರುವ ಎರಡು ಸಾಮ್ರಾಜ್ಯಗಳಲ್ಲ. ಸತ್ಯವ ನುಡಿವುದೇ ದೇವಲೋಕ—ಮಿಥ್ಯವ ನುಡಿವುದೇ ಮರ್ತ್ಯಲೋಕ. ಮಾನವನ ತನ್ನ ನಡೆ ನುಡಿಯಿಂದ ಇಹಲೋಕವನ್ನೇ ನಾಕವವನ್ನಾಗಿ ಮಾಡಬಹುದು—ನರಕವನ್ನಾಗಿಯೂ ಮಾರ್ಪಡಿಸಬಹುದು. ಕೈಲಾಸದ ಮಹಾಮನೆಗೆ ಹೋಗ ಬಯಸುವವನು ಇಹದ ಕರ್ಮಭೂಮಿಯ ಪರೀಕ್ಷೆಯಲ್ಲಿಯೂ ತೇರ್ಗಡೆ ಹೊಂದಿರಬೇಕು. ಇದಕ್ಕೆ ಅಂತರಂಗ ಶುದ್ಧಿ, ಬಹಿರಂಗ ಶುದ್ಧಿ ಅತ್ಯವಶ್ಯಕ.

ಬಸವಣ್ಣನವರ ದರ್ಶನವನ್ನು ನಾವು ಜೀವನದರ್ಶನವೆಂದು ಕರೆಯಬಹುದು. ಮಾನವ, ಮಾನವಪುಂಗವನಾಗಲು ಬೇಕಾದ ಸಾಧನಗಳನ್ನು ಬಸವಣ್ಣನವರು ಒದಗಿಸಿದರು. ಜಾತಿ ಜಾತಿಗಳ ಹೋರಾಟ. ಸ್ಪೃಶ್ಯಾಸ್ಪೃಶ್ಯತೆಯ ಗೊಂದಲ, ಅನಾದ್ಯಕರ್ಮಗಳ ಪ್ರಾಬಲ್ಯಗಳನ್ನು

ಗಂಡೆದೆಯಿಂದ ಎದುರಿಸಿದರು. ಭಗವಾನ್ ಬುದ್ಧದೇವನ ಮಾನದಂಡವಾದ ದಯೆಯನ್ನು ಪುನರುಜ್ಜೀವನಗೊಳಿಸಿದರು.

"ದಯೆಯಿಲ್ಲದ ಧರ್ಮವಾವುದಯ್ಯ
ದಯೆಯೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯೆಯೇ ಧರ್ಮದ ಮೂಲವಯ್ಯ
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ"

ನಡೆ–ನುಡಿಗಳಿಗೆ ಸಾಮರಸ್ಯ ಕಲ್ಪಿಸಿ ಮನುಷ್ಯ ವಾಗದ್ವೈತಿಯಾದರೆ ಸಾಲದು, ವೇಷಧಾರಿ ಭಕ್ತನಾದರೆ ಸಾಲದು, ಶುಕಪಂಡಿತನಾದರೆ ಸಾಲದು, ನಡೆನುಡಿ ಎಲ್ಲದರಲ್ಲಿಯೂ ಪರಿಶುದ್ಧನಾಗಿರಬೇಕು. ಅವನು

"ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಪಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು
ನುಡಿಯೊಳಗೆ ನಡೆಯದಿದ್ದರೆ ಕೂಡಲಸಂಗಮ
ದೇವನೆಂತೊಲಿಯುವನಯ್ಯ"

ಸಾಧಕ, "ತೆರಹಿಲ್ಲದೆ ನಡೆ, ತೆರಹಿಲ್ಲದ ನುಡಿ, ತೆರಹಿಲ್ಲದ ನಂಬುಗೆ, ತೆರಹಿಲ್ಲದ ಸ್ವಾನುಭವಸುಖ, ತೆರಹಿಲ್ಲದ ವಿಚಾರ" ವುಳ್ಳವನಾಗಬೇಕು.

ಇಂಥ ಸಮಷ್ಟಿಭಾವನೆ, ನೈತಿಕ ವಿಚಾರ, ಅನುಭವ ಸಿದ್ಧಿ ಧರ್ಮದಲ್ಲಿ ಮೂಡಿದರೆ ಅದು ನಿತ್ಯನೂತನವೂ ಅವಿನಾಶಿಯೂ ಆಗುತ್ತದೆ, ಅವುಗಳ ಪ್ರಭಾವದಿಂದ ದಾನವ ಮಾನವನಾಗುತ್ತಾನೆ, ನರ ಹರನಾಗುತ್ತಾನೆ.

ಬಸವಣ್ಣನವರು ತಮ್ಮ ದರ್ಶನ, ಅದಕ್ಕೂ ಮಿಗಿಲಾಗಿ ಅದರ ಆಚರಣೆಯಿಂದ ಲೋಕಕ್ಕೆ ಮಾದರಿಯಾಗಿ ನಿಂತು, ಬೃಹತ್ ಸಂಸಾರ

ದಲ್ಲಿದ್ದೂ ಮಾನವ ಸಂಸಾರದಿಂದ ದೂರನಾಗುವ ಬಗೆಯನ್ನು ತೋರಿದರು. ಮರ್ತ್ಯವನ್ನೇ ದೇವಲೋಕವನ್ನಾಗಿಸುವ ರಹಸ್ಯವನ್ನುಪದೇಶಿಸಿದರು. ಜೀವನಿಗೂ ಪರಮನಿಗೂ ಇದ್ದ ಅಂತರವನ್ನು ತೊಡೆದು ಹಾಕಲೆತ್ನಿಸಿದರು.

ಕ್ರಿಸ್ತ, ಬುದ್ಧ, ಗಾಂಧೀಜಿಯವರಂತೆ ಸರ್ವಧರ್ಮಗ್ರಾಹ್ಯವೂ ಸರ್ವಜನೋಪಯೋಗಿಯೂ, ಆದ ತಮ್ಮ ಸಂದೇಶ ಸಾರವನ್ನು,

“ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ,
ಇದೇ ಅಂತರಂಗ ಶುದ್ಧಿ–ಇದೇ ಬಹಿರಂಗ ಶುದ್ಧಿ,
ಇದೇ ನಮ್ಮ ಕೂಡಲ ಸಂಗಮನೊಲಿಸುವ ಪರಿ”

ಎಂದು ಸೂಚಿಸಿದರು.

---

# ಬಸವಣ್ಣನವರ ವಚನಗಳು

ಬಸವಣ್ಣನವರ ವಚನಗಳನ್ನು ಒಬ್ಬ ಉತ್ಕಟ ಸಾಧಕನ ಆತ್ಮ ಚರಿತ್ರೆ ಎಂದು ಭಾವಿಸಬೇಕು. ಪಾರಮಾರ್ಥಿಕ ಭಾವನೆ ಅವರ ಹೃದಯದಲ್ಲಿ ಹುಟ್ಟಿದಂದಿನಿಂದ ಅದು ಬೆಳೆದು ಪೂ ಫಲಭರಿತವಾಗುವರೆಗೆ ಆದ ಎಲ್ಲಾ ಅವಸ್ಥೆಗಳ ಚಿತ್ರಗಳನ್ನು ನಾವು ಸ್ಪಷ್ಟವಾಗಿ ಕಾಣಬಹುದು. ನಿರ್ಧಾರದಿಂದ, ಆಶೆಯಿಂದ, ಆತ್ಮನಂಬಿಕೆಯಿಂದ ಹೊರಟ ಸಾಧಕ್ಕನಿಗೆ ಒಮ್ಮೆಲೇ ದಾರಿ ಕಾಣದಂತಾಗಿ ಅವನು ಪಡುವ ಯಾತನೆಗಳನ್ನು ಕಾಣಬಹುದು. ಕ್ಷಣಕಾಲ ಅವನ ನಂಬಿಕೆಗೆ ಧಕ್ಕೆ ತಗುಲುತ್ತದೆ. ಆದರೆ ಬಲವಾದ ಆಧ್ಯಾತ್ಮಿಕ ಅಸ್ತಿಭಾರದ ಮೇಲೆ ಸಾಧಕ ನಿಂತಿರುವುದರಿಂದ ಅವನ ಕ್ಷಣಿಕ ನಿರಾಶೆ, ಅಪನಂಬಿಕೆ, ಭಯಗಳು ದೂರವಾಗಿ ನಿರ್ಮಲಶಾಂತಿ ಜ್ಞಾನೋದಯದೊಂದಿಗೆ ಲಭಿಸುತ್ತದೆ. ಭಕ್ತಾವಸ್ಥೆಯಿಂದ ಸಾಧಕ ಶರಣಾವಸ್ಥೆಗೇರಿ ಲೋಕದ ಗುರುವಾಗಿ ತನ್ನ ಜೀವನದ ಮಾದರಿ, ಉಪದೇಶದ ತಿಳಿಬೆಳಕಿನಿಂದ ಕರ್ಮಕಾಸಾರದಲ್ಲಿ ಬಿದ್ದು ಕೆಸರಿನಲ್ಲಿ ಬಿದ್ದ ಪಶುವಿನಂತೆ ತೊಳಲಾಡುತ್ತಿರುವ ಮಾನವರನ್ನು ಉದ್ಧರಿಸುತ್ತಾನೆ.

ಸಾಧಕನ ಆಧ್ಯಾತ್ಮಿಕ ಯಾತ್ರೆಗೆ ಮೊದಲು ಅತ್ಯವಶ್ಯಕವಾಗಿ ಬೇಕಾದುದು ದೇವರಿದ್ದಾನೆ—ಎಲ್ಲೆಲ್ಲಿಯೂ ಇದ್ದಾನೆ ಎಂಬ ಭಾವನೆ-

ಭಾವನೆಯಲ್ಲಿ ಪೂರ್ಣ ನಂಬಿಕೆ.

"ಎತ್ತೆತ್ತ ನೋಡಿದರತ್ತತ್ತ ನೀನೇ ದೇವಾ
ಸಕಲ ವಿಸ್ತಾರದ ರೂಹು ನೀನೇ ದೇವಾ
ವಿಶ್ವತೋಬಾಹು ನೀನೇ ದೇವಾ
ವಿಶ್ವತೋಚಕ್ಷು ನೀನೇ ದೇವಾ
ವಿಶ್ವತೋಮುಖ ನೀನೇ ದೇವಾ
ವಿಶ್ವತೋಪಾದ ನೀನೇ ದೇವಾ,
ಕೂಡಲ ಸಂಗಮದೇವಾ"

ಸಾಧನೆಯ ಆರಂಭಾವಸ್ಥೆಯಲ್ಲಿ ಪರಮಾತ್ಮನ ವಿಶ್ವರೂಪ ವಿಶ್ವವ್ಯಾಪಕತ್ವ ಅಸ್ಪಷ್ಟವಾಗಿದ್ದುದು ಅವನು ಪರಿಣತಾವಸ್ಥೆಗೇರಿದ ಮೇಲೆ ಸುಸ್ಪಷ್ಟವೂ ನಿತ್ಯಸತ್ಯವೂ ಆಗುತ್ತದೆ. ಪರಮಾತ್ಮನು ಸರ್ವವ್ಯಾಪಿಯಾಗಿರುವಂತೆ ಸುಲಭಸಾಧ್ಯನೂ ಆಗಿರುತ್ತಾನೆ. ಅವನು ಬೇಕು ಎಂಬ ಹಂಬಲ ಸಾಧಕನಲ್ಲಿ ಉತ್ಕಟವಾಗಬೇಕು.

"ನಂಬರು, ನೆಚ್ಚರು, ಬರಿದೆ ಕರೆವರು
ನಂಬಲರಿಯರೀ ಲೋಕದ ಮನುಜರು
ನಂಬಿ ಕರೆದೊಡೆ 'ಓ' ಎನ್ನನೇ ಶಿವನು?
ನಂಬದೆ ನೆಚ್ಚದೆ ಬರಿದೆ ಕರೆವರ ಕೊಂಬೆಮೆಟ್ಟಿ
ಕೂಗೆಂದ ಕೂಡಲ ಸಂಗಮದೇವಾ"

ಅವನನ್ನು ಕಾಣಲು ಹಲವರು ಹಲವು ರೀತಿಯಲ್ಲಿ ಪ್ರಯತ್ನಿಸುತ್ತಾರೆ. ಪರಮಾತ್ಮನಿಗೆ ಎಲ್ಲ ಮಾರ್ಗವೂ ಪ್ರಿಯವೇ. ಮಾರ್ಗಾವಲಂಬಿ ಶ್ರದ್ಧಾಭಕ್ತಿವಂತನಾಗಿದ್ದರೆ ಸಾಕು. ಆದರೆ ಪರಮಾತ್ಮನ ಅಂತರಂಗವನ್ನು ಹೊಗಬಲ್ಲವರು ಭಕ್ತರು. ಶಿವನನ್ನು ಬಿಟ್ಟು ಭಕ್ತನಿಲ್ಲ; ಭಕ್ತನನ್ನು ಬಿಟ್ಟು ಶಿವನಿಲ್ಲ.

"ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲಯ್ಯ,
ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲಯ್ಯ,
ನಾದವ ಮಾಡಿದ ರಾವಣಗೆ ಅರೆಯಾಯುಷ್ಯವಾಯಿತು,
ವೇದವನೋದಿದ ಬ್ರಹ್ಮನ ಶಿರ ಹೋಯಿತು,

ನಾದ ಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ,
ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವಾ"

ಭಕ್ತನಿಗೂ ಪರಮಾತ್ಮನಿಗೂ ಸೇತುವೆ ಶರಣ. ಅವನ ಕೃಪೆಯಿಂದ ಭಕ್ತ ಪರಮಾತ್ಮನನ್ನು ಕರತಲಾಮಲಕ ಮಾಡಿಕೊಳ್ಳಬಲ್ಲ. ಅನುಭಾವ ಮಾರ್ಗವನ್ನು ತುಳಿದು ಈ ಮೊದಲೇ ಶರಣ ಎಲ್ಲ ಧಾವತಿಯನ್ನು ಅನುಭವಿಸಿ ತನ್ನ ಮನಸ್ಸನ್ನು ಒಂದು ಪಾಕಕ್ಕೆ—ಒಂದು ನಿಲುಗಡೆಗೆ ತಂದುಕೊಂಡಿರುತ್ತಾನೆ. ಭಕ್ತನ ಸಂಶಯ, ದುಃಖ, ಭಯಗಳನ್ನು ದೂರಮಾಡಿ ಅವನಿಗೆ ಅಭಯ ನೀಡಬಲ್ಲ ಸದ್ಗುರು ಅವನೇ.

"ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯ
ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯ
ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯ
ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯ
ಕೂಡಲ ಸಂಗನ ಶರಣರ ಅನುಭಾವದಿಂದ ಎನ್ನ
ಭವದ ಕೇಡು ನೋಡಯ್ಯ"

ಶರಣರ ಕೃಪೆ—ಪರಮಾತ್ಮನ ಕಟಾಕ್ಷ ಲಭಿಸಬೇಕಾದರೆ ಭಕ್ತ ಶುದ್ಧ ಮನಸ್ಕನಾಗಿರಬೇಕು.

"ತನು ಶುಚಿಯಿಲ್ಲದವನ ದೇಹಾರವೇಕೆ ?
ದೇವರು ಕೊಡನೆಂಬ ಭ್ರಾಂತದೇಕೆ ?
ಮನಕ್ಕೆ ಮನವೇ ಸಾಕ್ಷಿ ಸಾಲದೇ ಲಿಂಗ ತಂದೆ
ಹೇಗೆ ಮನ ಹಾಗೆ ಘನ ತಪ್ಪದು ಕೂಡಲ ಸಂಗಮದೇವಾ"

ಭಕ್ತನ ಚಿತ್ತ ಯಾವಾಗ ಪರಿಶುದ್ಧವಾಗಿ ಅವನ ಸರ್ವ ಭಾವನೆ, ಚೇತನ, ವಿಚಾರ ಪರಮಾತ್ಮಮಯವಾಗುವುದೋ ಆಗ ಅವನಿಗೆ ಒಂದು ಹಿರಿಯ ಪರತತ್ತ್ವ ಗೋಚರವಾಗುತ್ತದೆ.

"ಸ್ವಾಮಿ ನೀನು, ಶಾಶ್ವತನು ನೀನು
ಎತ್ತಿದ ಬಿರಿದ ಜಗಮೆಲ್ಲರಿಯಲು,
ಮಹಾದೇವ ಮಹಾದೇವ, ಇಲ್ಲಿಂದ ಮೇಲೆ ಶಬ್ದವಿಲ್ಲ

ಪಶುಪತಿ ಜಗಕ್ಕೆ ಏಕೋ ದೇವಾ
ಸ್ವರ್ಗಮರ್ತ್ಯ ಪಾತಾಳದೊಳಗೆ ಒಬ್ಬನೇ ದೇವ,
ಕೂಡಲ ಸಂಗಮದೇವಾ.”

“ದೇವನೊಬ್ಬ, ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದರೆ ಕಿವಿಮೂಗ ಕೊಯ್ವನು
ಹಲವು ದೈವದ ಎಂಜಲ ತಿಂಬುವನರನೇನೆಂಬೆ
ಕೂಡಲ ಸಂಗಮದೇವಾ”

ಏಕದೇವೋಪಾಸಕನಾದ ಭಕ್ತ ಪರಮಾತ್ಮನ ಧ್ಯಾನದಲ್ಲಿ ಮೈಮರೆಯುತ್ತಾನೆ. ಪರಮಾತ್ಮ ಬೇರೆ ಇದ್ದಾನೆ ಎಂಬ ವಿಸ್ಮೃತಿ ಅಳಿಯುತ್ತದೆ. ಅವನಿಗೆ ಪರಮಾತ್ಮನ ನೆನಹಿನ ಚಿಂತೆಯಲ್ಲದೆ ಬೇರೆ ಚಿಂತೆಯೇ ಇಲ್ಲ.

“ಚಕೋರಕ್ಕೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕೆ ಭಾನುವಿನ ಉದಯದ ಚಿಂತೆ
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ
ಎನಗೆ ಎಮ್ಮ ಕೂಡಲ ಸಂಗಮದೇವನ ನೆನೆವ ಚಿಂತೆ”

ಭಕ್ತನಿಗೆ ಪರಮಾತ್ಮನ ನೆನಹಾದಾಗಲೇ ಉದಯ, ಮರಹಾದಾಗಲೇ ಅಸ್ತಮ. ಪರಮಾತ್ಮನ ನೆನಹವೇ ಜೀವ—ಪ್ರಾಣ.

ಇಂತು ತನ್ನ—ತನವನ್ನು ಮಾಣಿಸಿಕೊಂಡ ಭಕ್ತ ಪರಮಾತ್ಮನ ಪಾದಾರವಿಂದದಲ್ಲಿ ಗಾಳಿಯಲ್ಲಿ ಘನನರು ಬೆರೆಯುವಂತೆ ಬೆರೆಯುತ್ತಾನೆ.

“ವಚನದಲ್ಲಿ ನಾಮಾಮೃತ ತುಂಬಿ,
ನಯನದಲ್ಲಿ ನಿಮ್ಮ ಮೂರುತಿ ತುಂಬಿ,
ಮನದಲ್ಲಿ ನಿಮ್ಮ ನೆನಹು ತುಂಬಿ,
ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ,
ಕೂಡಲ ಸಂಗಮದೇವ, ನಿಮ್ಮ ಚರಣ
ಕಮಲದೊಳಗಾನು ತುಂಬಿ.”

ಈ ಸ್ಥಿತಿಗೇರಿದಾನಂತರವೇ ಭಕ್ತ ಶರಣನಾಗುವುದು. ಇಲ್ಲಿಂದ ಲೋಕಕ್ಕವನು ಮಾರ್ಗದರ್ಶನ ಮಾಡಲು ಬಾಧ್ಯನೂ ಅಧಿಕಾರ ಸಂಪನ್ನನೂ ಆಗುತ್ತಾನೆ.

ಬಸವಣ್ಣನವರ ವಚನಾಸುಧಾಸರಸ್ಸಿನಲ್ಲಿ ಅಲ್ಲಲ್ಲಿ ಕೆಲವು ನೈತಿಕ, ಉಪದೇಶಾತ್ಮಕ ವಚನ ಕಮಲಗಳು ರಾರಾಜಿಸುತ್ತವೆ. ಉಪದೇಶಕ್ಕಿಂತ ಹೆಚ್ಚಾಗಿ ಅನುಷ್ಠಾನವನ್ನು ಜನತೆಯ ಮುಂದಿಟ್ಟ ಹಿರಿಮೆ ಅವರದು. ಆದರೆ ಅವರ ಜೀವನದಲ್ಲಿ ಹಾಸುಹೊಕ್ಕಾಗಿ ಹೊಂದಿಕೊಂಡ ಕೆಲವು ಸಂದರ್ಭಗಳು ಅವರಿಂದ ಉಪದೇಶಾತ್ಮಕ ನುಡಿಗಳನ್ನಾಡಿಸಿವೆ. ಆ ಉಪದೇಶದ ಮಾತುಗಳಲ್ಲಿಯೂ ಸಾಮಾನ್ಯ ಬುದ್ಧಿ, ಅನುಷ್ಠಾನಗಳಿಗತೀತವಾದ ಪಾಂಡಿತ್ಯ ಪ್ರದರ್ಶನವಿಲ್ಲ. ಅದೇ ಋಜುಭಾವ, ಅದೇ ದೀನದಯಾಪರತೆ, ಅದೇ ಸಾರಳ್ಯ, ಅದೇ ನಿರ್ಮಲಾಂತಃಕರಣ.

ಸ್ವರ್ಗ ಮರ್ತ್ಯವೆಂದು ವಾದಹೂಡಿ, ಇಂದಿನ ಕರ್ತವ್ಯದಿಂದ ಹಿಮ್ಮೆಟ್ಟಲು ಅವಕಾಶ ಕಲ್ಪಿಸಿಕೊಳ್ಳುವವರಿಗೆ

"ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ
ಸತ್ಯವ ನುಡಿವುದೇ ದೇವಲೋಕ.
ಮಿಥ್ಯವ ನುಡಿವುದೇ ಮರ್ತ್ಯಲೋಕ.
ಆಚಾರವೇ ಸ್ವರ್ಗ
ಅನಾಚಾರವೇ ನರಕ.
ಕೂಡಲ ಸಂಗಮದೇವ ನೀವೇ ಪ್ರಮಾಣ"

ಸದಾ ಸ್ವರ್ಗದ ಕಡೆ ನೋಡುತ್ತ ಮರ್ತ್ಯದ ಮಾನವ ತನ್ನ ಜೀವನದ ಗುರಿಯನ್ನು ಮರೆಯುವುದು ಅವಿವೇಕ. ಈ ಮರ್ತ್ಯವೂ ಕರ್ತಾರನ ಕಮ್ಮಟವೇ—ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು; ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲುವುದಿಲ್ಲ.

ಮಾನವ ಮನೋವಿಕಾಸಕ್ಕೆ ಪ್ರತಿಬಂಧಕಗಳಾಗುವುದು ಅವನ ಅಹಂಕಾರ, ಸಿಟ್ಟು. ನಾಲ್ಕು ದಿನ ಸಂಪತ್ತಿನ ಸೌಧದಲ್ಲಿ ವಾಸಿಸುವವನಿಗೆ ಅದು ಎಂದಾದರೊಂದು ದಿನ ಕುಸಿದು ಬೀಳಬಹುದೆಂಬ

ಅರಿವು ಬರುವುದಿಲ್ಲ. ಸಿರಿಯ ಹಮ್ಮಿನಲ್ಲಿ ಅವನು ಕರ್ತವ್ಯ ಮೂಢನಾಗಿ ಪಶುವಿನಂತೆ ವರ್ತಿಸುತ್ತಾನೆ.

"ಹಾವ ತಿಂದವರ ನುಡಿಸಬಹುದು,
ಗರ ಹೊಡೆದವರ ನುಡಿಸಬಹುದು.
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯ!
ಬಡತನವೆಂಬ ಮಂತ್ರವಾದಿ ಹೋಗಲು,
ಒಡನೆ ನುಡಿವರಯ್ಯ ಕೂಡಲ ಸಂಗಮದೇವಾ."

ಅಹಂಕಾರದ ಅನುಯಾಯಿಯೇ ಸಿಟ್ಟು. ಅಹಂಕಾರವನ್ನು ವ್ಯಕ್ತ ಮಾಡುವುದಕ್ಕೆ ಸಿಟ್ಟು ಒಂದು ಸಾಧನ. ಆದರೆ ಸಿಟ್ಟಿನಿಂದ ಯಾರಿಗೆ ಲಾಭ?.

"ತನಗೆ ಮುನಿವರಿಗೆ ತಾ ಮುನಿಯಲೇಕಯ್ಯ.
ತನಗಾದಡೇನು? ಅವರಿಗಾದರೇನು?
ತನುವಿನ ಕೋಪ ತನ್ನ ಹಿರಿತನದ ಕೇಡು.
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ,
ನೆರೆಮನೆಯ ಸುಡದು ಕೂಡಲ ಸಂಗಮದೇವಾ."

ಆರತವಡಗದು, ಕ್ರೋಧ ತೊಲಗದು.
ಕ್ರೂರ ಕುಭಾಷೆ ಕುಹಕ ಹಿಂಗದನ್ನಕ್ಕ.
ನೀನೆತ್ತಲು ಶಿವನೆತ್ತಲು ಹೋಗತ್ತಲು ಮರುಳೇ,
ಭವರೋಗವೆಂಬ ತಿಮಿರ ತಿಳಿಯದನ್ನಕ್ಕ
ಕೂಡಲ ಸಂಗಯ್ಯನೆತ್ತ ನೀನೆತ್ತ ಮರುಳೇ."

ಅಹಂಕಾರ, ಸಿಟ್ಟುಗಳನ್ನು ವರ್ಜಿಸಿ ಬಾಳುವೆ ಮಾಡಿದರೆ ಸಾಲದು. ಮಾನವ ವಿನಯಪರನಾಗಿರಬೇಕು. ಎಲ್ಲರ ಹಿರಿಮೆಯನ್ನು, ಎಲ್ಲ ಜೀವಾತ್ಮಗಳಲ್ಲಿ ಹುದುಗಿರುವ ಪರಮಾತ್ಮನ ಅಂಶವನ್ನು ಅರಿಯಲು ಅವನು ಸಮರ್ಥನಾಗಬೇಕು.

ಕಂಡ ಭಕ್ತರಿಗೆ ಕೈಮುಗಿವಾತನೆ ಭಕ್ತ.
ಮೃದುವಚನವೇ ಸಕಲ ಜಪಂಗಳಯ್ಯ.

ಮೃದುವಚನವೇ ಸಕಲ ತಪಂಗಳಯ್ಯ.
ಸದುವಿನಯವೇ ಸದಾಶಿವನ ಒಲುಮೆಯಯ್ಯ.
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ".

ಜೀವನಕ್ರಮವನ್ನು ಯೋಗ್ಯವಾದ ರೀತಿಯಲ್ಲಿ ವ್ಯವಸ್ಥೆ ಮಾಡಿಕೊಂಡು ಮಾನವ ಪ್ರಗತಿಶೀಲನಾಗಲು ಬಸವಣ್ಣನವರು ಕೆಲವು ದಿಗ್ದರ್ಶನದ ನುಡಿಗಳನ್ನಾಡಿದ್ದಾರೆ. ಬುದ್ಧ, ಯೇಸು, ಸೇಂಟ್ ಫ್ರಾನ್ಸಿಸ್ ಮೊದಲಾದ ಜಗದ್ಗುರುಗಳ ವಾಣಿ ಅದರಲ್ಲಿ ಮೊಳಗುತ್ತಿದೆ.

" ಕಳಬೇಡ, ಕೊಲಬೇಡ,
ಹುಸಿಯ ನುಡಿಯಲು ಬೇಡ.
ಮುನಿಯಬೇಡ.
ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗನನೊಲಿಸುವ ಪರಿ."

ಈ ವಚನದಲ್ಲಿ ದೇಶ, ಕಾಲ, ಧರ್ಮಾತೀತವಾದ ಜಗದ್ಸತ್ಯ ಅಡಕವಾಗಿರುವುದನ್ನು ನಾವು ಕಾಣಬಹುದು. ಪರಮಾತ್ಮನ ಅನುಗ್ರಹ ದೊರಕಿಸಲು ಮಾನವ ಮಲ್ಲವಿದ್ಯೆಯ, ಗಾರುಡಿ ವಿದ್ಯೆಯ, ಕಟುತರ ವಾಮಾಚಾರದ ಮರೆಹೊಗಬೇಕಾದ ಅಗತ್ಯವಿಲ್ಲ. ಅವನು ಸದಾಚಾರ ಸಂಪನ್ನನಾಗಿ, ಒಳಗು ಹೊರಗು ಶುದ್ಧನಾಗಿ, ಋಜುಮಾರ್ಗವನ್ನು ಹಿಡಿದು ನಡೆದರೆ ಸಾಕು.

ಸಾರ್ವತ್ರಿಕವಾಗಿ ಅನ್ವಯವಾಗುವ ಈ ಉಪದೇಶಗಳ ಜತೆಯಲ್ಲಿ ಭಾರತವರ್ಷಕ್ಕೆ ಅನ್ವಯಿಸುವ .ಕೆಲವು ವಿಶಿಷ್ಟ ವಚನಗಳು ಸಿಕ್ಕುತ್ತವೆ. ಭಾರತದ ಅಗಾಧ ಆಧ್ಯಾತ್ಮಿಕ ಸಂಸ್ಕೃತಿ, ಸಂಪತ್ತಿನೊಡನೆ ಕಿಲ್ಬಿಷಗಳೂ ಬಂದು ಕೂಡಿಕೊಂಡಿವೆ. ಒಂದು ಗುಲಗಂಜಿ ತೂಕ ಬಂಗಾರ ತೆಗೆಯಬೇಕಾದರೆ ಬಂಡಿಗಟ್ಟಳೆ ಮಣ್ಣು, ಕಲ್ಲು ಹೆಕ್ಕಬೇಕು. ಅಧ್ಯಾತ್ಮ ಸಾಧನವೆಲ್ಲಾ ಕೆಲವು ವೇಳೆ ಈ ಉಪಾಧಿಗಳ ನಿರಾಕರಣ

ದಲ್ಲಿ ಮುಗಿಯುತ್ತದೆ. ಸತ್ಯಸೂರ್ಯನನ್ನು ಮುಚ್ಚಿರುವ ಚಿನ್ನದ ತಟಿಗೆಯನ್ನತ್ತ ದೂಡು ಎಂದು ಘೋಷಿಸಿದ ಉಪನಿಷತ್ತಿನ ಋಷಿ ಉಪಾಧಿನಿರಾಕರಣದಾವಶ್ಯಕತೆಯನ್ನು ಚೆನ್ನಾಗಿ ಕಂಡುಕೊಂಡಿದ್ದ. ಸತ್ಯವೆಂದರೇನು ? ಪರಮಾತ್ಮನೆಂದರೇನು ? ಎಂದು ಆಳವಾಗಿ ಯೋಚಿಸಿದ ಸಾಧಕ, ಸಿದ್ಧ, ಅವಧೂತ, ಪೀರ, ಮುರ್ಷಿದರು ಒಂದೇ ನಿರ್ಧಾರಕ್ಕೆ ಬಂದಿದ್ದಾರೆ. ಸತ್ಯ ಮಾನವನಲ್ಲೇ ಅನವರತ ಪ್ರತಿಷ್ಠಿತವಾಗಿರುವ ಘನ ತತ್ತ್ವ. ಆದರೆ ಅದರ ನಿಜಸ್ವರೂಪ ಹೊರಗೆ ಬಾರದಂತೆ ಉಪಾಧಿಗಳು ಅದನ್ನು ಮುಚ್ಚಿರುತ್ತವೆ. ಈ ಉಪಾಧಿಗಳ ತೆರೆಯನ್ನು ಯಾವಾಗ ಮಾನವ ಹರಿಯಬಲ್ಲನೋ ಆಗ ಸತ್ಯಪ್ರಭೆ ತನ್ನ ಸಹಜ ತೇಜದಿಂದ ಬೆಳಗುತ್ತದೆ.

ಈ ಉಪಾಧಿಗಳಲ್ಲಿ ಘನತರವಾದುದು ಸಾಧಕನ ಹುಟ್ಟಿನ ಹಿಡಿತ. ಪ್ರಾಚೀನ ಪರಂಪರೆ ಅವನನ್ನು ಉಕ್ಕಿನ ಹಿಡಿತದಲ್ಲಿ ಹಿಡಿದಿರುತ್ತದೆ. ನಾನು ದೊಡ್ಡವನು—ನನ್ನ ಜಾತಿ ದೊಡ್ಡದು ಎಂಬ ಭಾವನೆಯೊಂದಿಗೆ ತನ್ನ ಜಾತಿಯ ಕಟ್ಟಿನೊಳಗೆ ಬಾರದಿರುವವರು ಕೀಳೆಂಬ ಭಾವನೆಯೂ ಸಹಜವಾಗಿ ಬೆಳೆದಿರುತ್ತದೆ. ಲೋಕದ ಆಚಾರ, ವಿಚಾರಗಳನ್ನು ಬಿಟ್ಟು ಪರಮಾತ್ಮನ ಆಚಾರ ವಿಚಾರಗಳನ್ನು ಅನುಸರಿಸ ಹೊರಟ ಸಾಧಕ ಜಾತಿಯ ಮೇಲು ಕೀಳುಗಳ ಬಗ್ಗೆಯೂ ತನ್ನ ಅಭಿಪ್ರಾಯವನ್ನು ಮಾರ್ಪಡಿಸಿಕೊಳ್ಳಬೇಕು.

ಎಂತಹವನಾದಡೇನು ?
ಲಿಂಗ ಮುಟ್ಟಿದವನೇ ಕೀಳುಜಾತಿ.
ಕುಲವಹುದು ತಪ್ಪದೆ ಲಿಂಗವ ಮುಟ್ಟಲೊಡನೆ
ಶಿವಕುಲವಹುದು ತಪ್ಪದು.
ಪರುಷಮುಟ್ಟಲೊಡನೆ ಕಬ್ಬುನ ಹೊನ್ನಹುದು ತಪ್ಪದು.
ಕೂಡಲ ಸಂಗಮದೇವನೊಲ್ಲ ಸರ್ವ ಸಂದೇಹಿಗಳ."

'ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲ ಒಂದೇ ಎಂಬೆ' ಎಂದು ಬಸವಣ್ಣನವರು ಸಾರಿದರು. ಬಸವಣ್ಣನವರ ಕಣ್ಣಿಗೆ

ಕಾಣುವುದು ಎರಡೇ ಜಾತಿ—ಶಿವನತ್ತ ತಿರುಗಿದವರು; ಶಿವನನ್ನು ತೊರೆದು ದೂರ ಸರಿದವರು. ಇಂತಹ ಉದಾತ್ತ ಭಾವನೆ ಬೆಳೆದ ಮೇಲೆ ಇತರರನ್ನು ಜಾತಿಯಿಂದ ಕೀಳೆನ್ನುವುದೇ ತಪ್ಪಾದಾಗ ಒಂದು ಜಾತಿಯನ್ನು ಹೊಲೆಯರೆಂದು ಕರೆದು ಅವರನ್ನು ಸಮಾಜ ಬಾಹಿರ ರನ್ನಾಗಿ ಮಾಡುವುದು ಘೋರ ಅಪರಾಧ.

" ಕೊಲ್ಲುವವನೇ ಮಾದಿಗ
ಹೊಲಸು ತಿಂಬುವವನೇ ಹೊಲೆಯ
ಕುಲವೇನೋ, ಆವಂದಿರ ಕುಲವೇನೋ ?
ಸಕಲ ಜೀವಾತ್ಮರಿಗೆ ಲೇಸನೇ ಬಯಸುವ
ನಮ್ಮ ಕೂಡಲ ಸಂಗನ ಶರಣರೇ ಕುಲಜರು"

ಕೇವಲ ಪ್ರಾಣಿವಧೆಯೇ ಕೊಲೆಯಲ್ಲ. ಮನಸ್ಸಿನ ಮೇಲೆ ಮಾಡುವ ಆಘಾತ ಪ್ರಾಣಿವಧೆಗಿಂತಲೂ ಭಯಂಕರ ಕೊಲೆ. ಅಡಗ ಮಾತ್ರ ಹೊಲಸೆನಿಸಿಕೊಳ್ಳುವುದಿಲ್ಲ. ಶಿವಾರ್ಪಿತವಲ್ಲದ, ನ್ಯಾಯವಾಗಿ ತನ್ನದಲ್ಲದ ಸಮಸ್ತ ವಸ್ತುವೂ ಹೊಲಸೆ. ಕೂಡಲ ಸಂಗಮದೇವನನ್ನು ನಂಬ ದಿದ್ದವನೇ ಹೊಲೆಯ.

ಸಾಧಕನ ಆಧ್ಯಾತ್ಮಿಕ ಪ್ರಗತಿಯ ದೃಷ್ಟಿಯಲ್ಲಿ ಸಮಾನಸ್ಕಂದತೆ ಯನ್ನು ಸ್ಥಾಪಿಸಿಕೊಳ್ಳುವುದು ಮಹತ್ವದ ಮಜಲು. ಸರ್ವಏಕೈಕ ವಾದ ಈ ದೃಷ್ಟಿ ಬೆಳೆಯಬೇಕಾದರೆ ಸಾಧಕ ದಯಾಪೂರ್ಣನಾಗಿರಬೇಕು. (ಯಾರ ಅಂತಃಕರಣ ಜಗತ್ತಿನ ದುಃಖಕ್ಕೆ ಮಮ್ಮಲ ಮರುಗುವುದೋ ಯಾರ ಹೃದಯದಲ್ಲಿ ಭಗವಂತನ ಪ್ರೇಮ ವಿರಾಟ ಸ್ವರೂಪದಲ್ಲಿ ವಿರಾ ಜಿಸುವುದೋ ಅದೇ ಧರ್ಮದ ನೆಲೆ. ಅದೇ ಜ್ಞಾನದ ಬೀಡು. ಶಾಂತಿಯ ಸೋಪಾನ.)

" ದಯವಿಲ್ಲದ ಧರ್ಮವಾವುದಯ್ಯ.
ದಯೆಯೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ.
ದಯೆಯೇ ಧರ್ಮದ ಮೂಲವಯ್ಯ.
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ"

ದಯೆ ಯಾವಾಗ ಸಾಧಕನ ಅಂತರಂಗವಾಸಿಯಾಗುವುದೋ ಆವನ ಸರ್ವಸ್ವವೂ ದೀನ ದಲಿತರ ದುಃಖೋಪಶಮನಕ್ಕೆ ವಿನಿಯೋಗವಾಗುತ್ತದೆ. ಬೇಡುವರ ನೋಡಿ ಈಯಲ್ಲಿಲ್ಲದ ಜೀವನವದೇಕೆ' ಎಂದು ಬಸವಣ್ಣನವರು ಕೇಳುತ್ತಾರೆ.

"ಕಾಗೆ ಒಂದಗುಳ ಕಂಡರೆ ಕರೆಯದೇ ತನ್ನ ಬಳಗವನು?
ಕೋಳಿ ಒಂದು ಕುಟುಕ ಕಂಡರೆ,
ಕೂಗಿ ಕರೆಯದೆ ತನ್ನ ಕುಲವೆಲ್ಲವ?
ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದರೆ, ಆ ಕಾಗೆ ಕೋಳಿಗಿಂದ
ಕರಕಷ್ಟ ಕೂಡಲ ಸಂಗಮದೇವಾ"

ಕೊಡುವ ವರ, ನೀಡುವ ದಾನ ಪ್ರತಿಫಲಾಪೇಕ್ಷೆಯುಳ್ಳದೆ ಇರಬೇಕು. ಅಹಂಕಾರದಿಂದ, ಬೇಸರದಿಂದ, ಕೀರ್ತಿಲಾಭದಿಂದ ಮಾಡುವ ದಾನ ದಾನವಲ್ಲ. ಬೇಡುವವನಿಗಿಂತ ನೀಡುವವನು ವಿನಯಶೀಲನಾಗಿರಬೇಕು.

"ಅನವರತ ಮಾಡಿಹೆನೆಂದು,
ಉಪ್ಪರಗುಡಿಯ ಕಟ್ಟಿ ಮಾಡುವ ಭಕ್ತನ ಮನೆಯದು
ಅಂದಣಗಿತ್ತಿಯ ಮನೆ.
ಸರ್ವಜೀವದಯಾಪಾರಿಯೆಂದು ಭೂತದ್ಯೆವಕಿಕ್ಕುವನ ಮನೆ
ಸುಯಿಧಾನದ ಕೇಡು.
ಸೂಳೆಯ ಮಗ ಮಹಳವ ಮಾಡಿದರೆ, ತಾಯ ಹೆಸರಾಯಿತ್ತು,
ತಂದೆಯ ಹೆಸರಿಲ್ಲ ಕೂಡಲ ಸಂಗಮದೇವಾ."

"ಮಾಡಿದೆನೆಂದು ಮನದಲ್ಲಿ ಹೊಳೆದರೆ
ಏಡಿಸಿ ಕಾಡಿತ್ತು ಶಿವನ ಡಂಗುರ
ಮಾಡಿದೆನೆನ್ನದಿರಾ ಲಿಂಗಕ್ಕೆ
ಮಾಡಿದೆನೆನ್ನದಿರಾ ಜಂಗಮಕ್ಕೆ
ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ
ಬೇಡಿದನೀವನು ಕೂಡಲಸಂಗಮದೇವಾ."

ಭಕ್ತ ಮಾಡುವದೇನು ? ನೀಡುವದೇನು ? ಶಿವನ ವಸ್ತುವನ್ನು ಶಿವನಿಗೇ ಕೊಡುತ್ತಾನೆ. ಒಡೆಯರೊಡವೆಯ ಒಡೆಯರಿಗೊಪ್ಪಿಸಿದರೆ ಅದಕ್ಕೆ ನಾನು ಮಾಡಿದೆ ಎಂಬ ಹಮ್ಮುಬಿಮ್ಮೇಕೆ ಬರಬೇಕು ?

'ಶಿವಮಯಂ ಜಗತ್' ಎಂಬ ಪರಿಜ್ಞಾನ ಭಕ್ತನ ಸಮಸ್ತ ಅಂಧಕಾರವನ್ನೂ ಬಗೆಹರಿಸುತ್ತದೆ. ಭಕ್ತ ಬೇರೊಂದು ದೇವಾಲಯವನ್ನರಸುತ್ತ ಹೋಗಿ ಅಲ್ಲಿ ಶಿವನಿಗೆ ಪೂಜೆ ಸಲ್ಲಿಸಬೇಕಾಗಿಲ್ಲ. ಶಿವನನ್ನು ಎಲ್ಲೆಲ್ಲಿಯೋ ಅರಸಿ ತೊಳಲಬೇಕಾಗಿಲ್ಲ. 'ಎನ್ನ ಮನದ ಪಂಚೇಂದ್ರಿಯಗಳು ನಿಮ್ಮಕೃತ್ಯಲಾದರೆ ತನ್ನಂತೆ ಮಾಡುವ ಕೂಡಲ ಸಂಗಮದೇವ' ಎಂದು ಬಸವಣ್ಣನವರು ಹೇಳುತ್ತಾರೆ.

"ಉಳ್ಳವರು ಶಿವಾಲಯವ ಮಾಡಿಪರು.
ನಾನೇನ ಮಾಡುವೆನಯ್ಯಾ ?
ಎನ್ನ ಕಾಲೇ ಕಂಬ, ದೇಹವೇ ದೇಗುಲ,
ಶಿರವೇ ಹೊನ್ನ ಕಳಶವಯ್ಯಾ,
ಕೂಡಲಸಂಗಮದೇವ ಕೇಳಯ್ಯ, ಸ್ಥಾವರಕ್ಕಳಿವುಂಟು,
ಜಂಗಮಕ್ಕಳಿವಿಲ್ಲ."

ನಾನೂ ಶಿವನೂ ಬೇರೆಯಲ್ಲ ಎಂಬ ಭಾವನೆ ಬಂದ ಭಕ್ತನ ದೇಹವೇ ದೇವಾಲಯವಾಗುತ್ತದೆ. ಅವನು ದೇವಾಲಯವನ್ನರಸಿಕೊಂಡು ಹೋಗಬೇಕಾಗಿಲ್ಲ, ಅವನನ್ನರಸಿಕೊಂಡು ಇತರರು ಬರುತ್ತಾರೆ.

• ಈ 'ಶಿವೋಹಂ' ಸ್ಥಿತಿಗೆ ಪ್ರತಿಯೊಬ್ಬ ಸಾಧಕನನ್ನು ಮುಟ್ಟಿಸಿ ಅವನನ್ನು ಲೋಕದ ಗುರುವನ್ನಾಗಿ ಮಾಡಬೇಕೆಂಬುದೇ ಬಸವಣ್ಣನವರ ಗುರಿಯಾಗಿತ್ತು.

# ವಚನಕಾರ ಬಸವೇಶ್ವರ

ವಚನ ಸಾಹಿತ್ಯ ಪರಂಪರೆ ಬಸವಣ್ಣನವರಿಗಿಂತ ಒಂದು ಶತ ಮಾನ ಮೊದಲು ಆರಂಭವಾಗಿರಬೇಕೆಂದು ಪಂಡಿತರು ಊಹಿಸುತ್ತಾರೆ. ಬಸವಣ್ಣನವರಿಗೆ ಹಿಂದಿನವರಾದ ದೇವರ ದಾಸಿಮಯ್ಯ, ಮೆರೆ ಮಿಂಡಯ್ಯ, ಸಕಲೇಶ ಮಾದರಸ ಮೊದಲಾದವರು ವಚನ ಸಾಹಿತ್ಯ ನಿರ್ಮಾತೃಗಳಾಗಿದ್ದುದು ಮಾತ್ರವಲ್ಲದೆ ಅದರಲ್ಲಿ ಸಾಕಷ್ಟು ಸಿದ್ಧಿಯನ್ನೂ ಪಡೆದುಕೊಂಡಿದ್ದರು.

ದೇವರ ದಾಸಿಮಯ್ಯನಿಗೂ ಪೂರ್ವದಲ್ಲಿ ವಚನ ಸಾಹಿತ್ಯ ರೂಢಿ ಯಲ್ಲಿದ್ದಿರಬೇಕೆಂದು ದಾಸಿಮಯ್ಯನ ವಚನಗಳಿಂದ ತಿಳಿದುಬರುತ್ತದೆ.

"ಕರಿಯನಿತ್ತಡೆ ಒಲ್ಲೆ,
ಸಿರಿಯನಿತ್ತಡೆ ಒಲ್ಲೆ,
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ
ಇತ್ತಡೆ ನಿಮ್ಮನಿತ್ತೆ ಕಾಣೆ ರಾಮನಾಥ."

'ಕಡುದರ್ಪವೇರಿದ ಒಡಲೆಂಬ ಬಂಡಿಗೆ ಮೃಡಶರಣರ ನುಡಿಗಡಣವೇ ಕಡೆಗೀಲು ಕಾಣಾ ರಾಮನಾಥ' ಎಂದು ದಾಸಿಮಯ್ಯ ವೃಥವಾಗಿ

ನಂಬಿದ್ದ. ದಾಸಿಮಯ್ಯನ ವಿಚಾರಧಾಟಿ, ಹಲವು ಉಪಮೆಗಳನ್ನು ಬಸವಣ್ಣನವರೂ ಇತರ ವಚನಕಾರರೂ ಧಾರಾಳವಾಗಿ ಬಳಸಿಕೊಂಡಿದ್ದಾರೆ. ತರುವಾಯದ ವಚನಕಾರರಲ್ಲಿ ಕಂಡು ಬರುವ ಭಾಷಾ ಲಾಲಿತ್ಯ, ವಿಚಾರ ವೈಭವ, ಸತ್ಯಾನ್ವೇಷಣೆ, ಮಾಯಾಮಲ ಖಂಡನೆಗಳಿಗೆ ದಾಸಿಮಯ್ಯನ ವಚನಗಳು ಬುನಾದಿ ಹಾಕಿಕೊಟ್ಟಿರಬೇಕೆನ್ನುವುದು ಸ್ವತಃಸಿದ್ಧವಾಗುತ್ತದೆ.

ಭಕ್ತನನ್ನು ಪರಮೇಶ್ವರ ಸತತ ಪರೀಕ್ಷಿಸುತ್ತಾನೆ

“ಹರ ತನ್ನ ಭಕ್ತರ ತಿರಿವಂತೆ ಮಾಡುವ.
ಒರೆದು ನೋಡುವ ಸುವರ್ಣದ ಚಿನ್ನದಂತೆ.
ಅರೆದು ನೋಡುವ ಚಂದನದಂತೆ.
ಅರಿದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದೆತ್ತಿಕೊಂಬ ನಮ್ಮ
ರಾಮನಾಥನ.”

ಇದೇ ವಿಷಯವನ್ನು ಕುರಿತಾದ ಬಸವಣ್ಣನವರ ವಚನ:

“ಶಿವಭಕ್ತನಾಗಿ ತನ್ನ ಹಿಡಿದಿಹನೆಂದು ಹೋದರೆ
ನುಗ್ಗುಮಾಡುವ, ನುಸಿಯುಮಾಡುವ, ಮಣ್ಣು ಮಾಡುವ,
ಮುಸಿಯು ಮಾಡುವ
ಕೂಡಲ ಸಂಗಮದೇವರ ನೆರೆ ನಂಬಿದನಾದರೆ ಕಡೆಗೆ
ತನ್ನಂತೆ ಮಾಡುವ.”

ನಿಜಭಕ್ತಿಯನ್ನು ವಿವರಿಸುತ್ತಾ ದಾಸಿಮಯ್ಯ:

“ಒಲವಿಲ್ಲದ ಭಕ್ತಿ, ಲವಲವಿಕೆ ಇಲ್ಲದ ಪೂಜೆ,
ಸಲೆ ನಿಮ್ಮ ನಂಬಿ ನಂಬದವನ ಬಾಳುವೆ,
ಹೊಲೆಯರ ನಾಯಿ ಹುಲುಸರವಿಯಿಂದ ಕರಕಷ್ಟ
ಕಾಣಾ ರಾಮನಾಥ.”

ಇದೇ ಅರ್ಥದ ಬಸವಣ್ಣನವರ ವಚನ:

“ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ,

ಆ ಪೂಜೆಯು, ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ,
ಚಿತ್ರದ ಕಬ್ಬು ಕಾಣಿರಣ್ಣಾ,
ಅಪ್ಪಿದರೆ ಸುಖವಿಲ್ಲ, ಮೆಲಿದರೆ ಸವಿ ಇಲ್ಲ,
ಕೂಡಲ ಸಂಗಮದೇವ ನಿಜವಿಲ್ಲದವನ ಭಕ್ತಿ."

ಕೂಲಿಗೊಟ್ಟು ಮಾಡಿಸುವ ಡಾಂಭಿಕ ಪೂಜೆಯನ್ನು ಕುರಿತು ದೇವರ ದಾಸಿಮಯ್ಯ :

"ಸತಿಯರ ಸಂಗವನು, ಅತಿಶಯದ ಗ್ರಾಸವನು,
ಪೃಥ್ವೀಶ್ವರನ ಪೂಜೆಯನು,
ಅರಿವುಳ್ಳೊಡೆ ಹೆರವರ ಕೈಯಿಂದ ಮಾಡಿಸುವರೇ ರಾಮ
ನಾಥ."

ಅದೇ ಭಾವವನ್ನು ಸೂಚಿಸುವ ಬಸವಣ್ಣನವರ ವಚನ:

"ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು,
ಬೇರೆ ಮತ್ತೊಬ್ಬರ ಕೈಯ್ಯಲು ಮಾಡಿಸಲುಬಹುದೇ ?
ತನ್ನಲಿಂಗಕ್ಕೆ ಮಾಡುವ ನಿತ್ಯನೇಮವ ತಾ ಮಾಡಬೇಕಲ್ಲದೆ.
ಬೇರೆ ಮತ್ತೊಬ್ಬರ ಕೈಯಲು ಮಾಡಿಸಲುಬಹುದೇ ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ ನಿಮ್ಮನೆತ್ತಬಲ್ಲರು
ಕೂಡಲಸಂಗಮದೇವಾ."

ಜಗತ್ತಿನಲ್ಲಿರುವ ಸಕಲವಸ್ತುಗಳೂ ಪರಮಾತ್ಮನಗುಣವನ್ನೇ ಅವಿರ್ಭವಿಸಿವೆ. ಆದರೂ ಪರಮಾತ್ಮ ಅವುಗಳಿಗೆ ದೂರನಾಗಿರುತ್ತಾನೆ.

"ಎಣ್ಣೆ ಇದ್ದು ಎಳ್ಳು ನೆನೆಯದ ಭೇದವ,
ಕಿಚ್ಚಿದ್ದು ಕಲ್ಲು ಸಿಡಿಯದ ಭೇದವ,
ಕಾಮವಿರ್ದು ಕನ್ನೆಯನುಭವಿಸಿದ ಭೇದವ,
ಪರವಿದ್ದು ಪ್ರಾಣನ ಪ್ರಕೃತಿಯು ಹರಿಯದ ಭೇದವ
ನರರೆತ್ತ ಬಲ್ಲರೈ ರಾಮನಾಥ."

ಅದೇ ಅಭಿಪ್ರಾಯವನ್ನು ಬಸವಣ್ಣನವರು ಹೇಳಿರುವ ಬಗೆ :

"ಉದಕದೊಳಗೆ ಬೈಚಿಟ್ಟ ಕಿಚ್ಚಿನಂತೆ ಇದ್ದಿತ್ತು

ಸಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು
ನನೆಯೊಳಗಣ ಪರಿಮಳದಂತೆ ಇದ್ದಿತ್ತು
ಕೂಡಲ ಸಂಗಮದೇವ ಕನ್ನೆಯ ಸ್ನೇಹದಂತಿದ್ದಿತ್ತು."

ಬಸವಣ್ಣನವರಿಗೆ ಬಹು ಕಾಲಕ್ಕೆ ಮುಂಚೆ ವಚನ ಸಾಹಿತ್ಯ ಸಂಪ್ರದಾಯ ಆರಂಭವಾಗಿದ್ದರೂ ಅದಕ್ಕೆ ಒಂದು ವ್ಯವಸ್ಥಿತರೂಪು ಕೊಟ್ಟು, ಸಾಹಿತ್ಯದಲ್ಲಿ ಅದರ ಸ್ಥಾನವನ್ನು ಭದ್ರಗೊಳಿಸಿದ ಕೀರ್ತಿ ಬಸವಣ್ಣನವರಿಗೇ ಸೇರಬೇಕು. ಆದ್ಯರ ವಚನ ಪರುಷ ಕಂಡಯ್ಯ— ಆದ್ಯರ ವಚನ ಆದ್ಯರಿಗಾಯಿತ್ತು ವೇದ್ಯರಿಗಲ್ಲದೆ ಸಾಧ್ಯವಾಗದು ಮೊದಲಾದ ಮಾತುಗಳಿಂದ ಬಸವಣ್ಣನವರು ತಮ್ಮ ಋಣವನ್ನೊಪ್ಪಿ ಕೊಳ್ಳುವುದಕ್ಕೆ ಹಿಂಜರಿದಿಲ್ಲವೆಂಬುದೂ ಗೊತ್ತಾಗುತ್ತದೆ.

ಕನ್ನಡದ ಮಹಾಕಾವ್ಯ ಪರಂಪರೆ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ ಬಸವಣ್ಣನವರು ಆಗಮಿಸಿದವರು. ಅವರ ಕೈಗೆ ನೇರವಾಗಿ ಸಿಕ್ಕುತ್ತಿದ್ದುದು ಚಂಪೂ ಕಾವ್ಯಗಳ ಮಾದರಿ. ಬಸವಣ್ಣನವರಲ್ಲಿದ್ದ ಕಾವ್ಯ ಪ್ರತಿಭೆ, ಪಾಂಡಿತ್ಯಗಳ ಬಲದಿಂದ ಅವರು ಚಂಪೂ ಕಾವ್ಯ ರಚನೆಗೆ ಕೈಹಾಕಿದ್ದರೆ ಶ್ರೇಷ್ಠವರ್ಗದ ಕವಿಗಣದಲ್ಲಿ ಸ್ಥಾನ ನಿಸ್ಸಂದೇಹವಾಗಿ ಪಡೆಯುತ್ತಿದ್ದರು. ಆದರೆ ಆಕಾಲದಲ್ಲಿ ಹೆಚ್ಚು ಪ್ರಸಿದ್ಧವೂ ಪ್ರಚಲಿತವೂ ಅಲ್ಲದ ವಚನ ಮಾದರಿಯನ್ನು ಅವರು ಆಶ್ರಯಿಸಿ ಅದನ್ನೇ ವಿಪುಲವಾಗಿ ಬೆಳಸಿದರು.

ಅವರು ಸ್ಥಾಪಿಸಿದ 'ಅನುಭವ ಮಂಟಪ'ದ ವಿಚಾರ ಗೋಷ್ಠಿಯಲ್ಲಿ ವಚನಮಾರ್ಗವೇ ಅನುಸರಿಸಲ್ಪಟ್ಟಿತು. ಇನ್ನೂರ ಹದಿಮೂರು ವಚನಕಾರರು ಸುಮಾರು ೮,೦೦೦ ವಚನಗಳನ್ನು ರಚಿಸಿರುವಂತೆ ತಿಳಿದುಬರುತ್ತದೆ. ಅವರಲ್ಲಿ ೩೬ಮಂದಿ ಸ್ತ್ರೀಯರು ವಚನಗಳನ್ನು ರಚಿಸಿದ್ದಾರೆ ಬಸವಣ್ಣನವರು ವಚನ ಶೈಲಿಯನ್ನನುಸರಿಸಿ ಅದನ್ನು ಅನುಭವಮಂಟಪದಲ್ಲಿ ನಿಲಿಸುವುದಕ್ಕೆ ಅವರ ಧರ್ಮ, ಸಾಹಿತ್ಯ ದೃಷ್ಟಿಗಳಲ್ಲಿದ್ದ ವೈಶಿಷ್ಟ್ಯವೇ ಕಾರಣ.

ಕಾವ್ಯಕ್ಕಾಗಿ ಕಾವ್ಯವನ್ನು, ಲೌಕಿಕಲಾಭ, ಕೀರ್ತಿಗಳಿಗಾಗಿ ಕಾವ್ಯವನ್ನು ರಚಿಸುವುದು ಒಳ್ಳಿತಲ್ಲವೆಂಬ ಮತ ಬಸವಣ್ಣನವರದು. ಮಾನ

ವನೆ ಸರ್ವಶಕ್ತಿ, ಚೇತನ, ಗಮನ ಈಶನ ಕಡೆಗಿರಬೇಕು. ಅವನು ಕವಿಯಾಗಿದ್ದರೆ ಅವನ ಕಾವ್ಯ ಈಶನ ಪಥ ನಿರೂಪಿಸುವ ಸಾಧನವಾಗ ಬೇಕು. ಈಶಸ್ತುತಿಗೆ ಮೀಸಲಾದ ಜಿಹ್ವೆಯನ್ನು ಕ್ಷಣಭಂಗುರವಾದ ಲೌಕಿಕ ಸುಖ, ಸಂಪತ್ತು, ಪದವಿಗಳ ಆರ್ಜನೆಗೆ ದುರುಪಯೋಗ ಪಡಿಸಬಾರದು. ಈ ಭಾವನೆಯ ಪ್ರಸಾರಕ್ಕೆ ಬಸವಣ್ಣನವರು ವಚನ ಶೈಲಿ ಅತ್ಯುತ್ತಮ ಮಾರ್ಗವೆಂಬುದನ್ನು ಗ್ರಹಿಸಿದರು. ಗದ್ಯದ ಲಾಲಿತ್ಯ ವನ್ನು ತಂದುಕೊಳ್ಳದಿದ್ದರೆ ಜನಕ್ಕೆ ಸಾಹಿತ್ಯ ಅರ್ಥವಾಗುವುದಿಲ್ಲ; ಕೇವಲ ಗದ್ಯವನ್ನೇ ಬಳಸಿದರೆ ಜನ ಅದರ ಭಾವ, ವಿಚಾರಗಳನ್ನು ಸುಲಭವಾಗಿ ನೆನಪಿನಲ್ಲಿಡುವುದಕ್ಕಾಗುವುದಿಲ್ಲ. ಪದ್ಯದ ಬಿಕ್ಕಟ್ಟು, 'ಕಿರಿದರೊಳ ಪಿರಿದು ಮಾರ್ಥವನರಿಪ' ಶಕ್ತಿ, ಶಿಲ್ಪ ಕೌಶಲ್ಯವನ್ನೂ ಗದ್ಯದ ಲಾಲಿತ್ಯ, ಸಾರಳ್ಯ, ಸೌಲಭ್ಯಗಳನ್ನೂ ಮಿಳನ ಮಾಡಿಕೊಂಡ ವಚನಶೈಲಿ ಅವರಿಗೆ ಅತ್ಯುತ್ತಮವೆನಿಸಿತು.

ಕವಿ ಮಹಾಲಿಂಗರಂಗ ಹೇಳಿದಂತೆ 'ಕನ್ನಡದಲ್ಲಿ ಮೋಕ್ಷಗಳಿಸಿ ಕೊಂಡರೆ ಸಾಲದೆ ಸಂಸ್ಕೃತದಲ್ಲಿನ್ನೇನು' ಎಂಬ ಪಂಥಕ್ಕೆ ಬಸವಣ್ಣ ನವರು ಸೇರಿದವರು. ತಮಿಳಿನ ಪ್ರಬಂಧಕಾರರು, ಮಹಾರಾಷ್ಟ್ರದ ಅಭಂಗಕಾರರು, ಹಿಂದಿಯ ಸಂತರು ತಮ್ಮ ತಮ್ಮ ದೇಶಭಾಷೆಗಳನ್ನೇ ಉಪಯೋಗಿಸಿಕೊಂಡು ಅವುಗಳ ಮೂಲಕ ಜನತೆಯಲ್ಲಿ ಧರ್ಮ ತತ್ತ್ವ ವನ್ನು ಬಿತ್ತರಿಸಿದಂತೆ ಕನ್ನಡ ಜನತೆಯ ಉದ್ಧಾರಕ್ಕೆ ಕನ್ನಡವೇ ಆಗ ಬೇಕು ಎಂಬ ತತ್ತ್ವವನ್ನು ಬಸವಣ್ಣನವರು ಪ್ರತಿಪಾದಿಸಿದರು. ಅತ್ಯಂತ ನಿಗೂಢ, ಧರ್ಮತತ್ತ್ವವನ್ನು ಸಾಮಾನ್ಯ ಮನುಷ್ಯನಿಗೆ ಅರ್ಥವಾಗುವಂತೆ ಹೇಳಲು ಸಾಧ್ಯವೆಂಬುದನ್ನು ತೋರಿಸಿಕೊಟ್ಟರು. ಇದರಿಂದ ಪಂಡಿತರು ವ್ಯಾಖ್ಯಾನಗಾರರು, ಪೂಜಾರಿಗಳ ಮಧ್ಯಸ್ಥಿಕೆಯಿಲ್ಲದೆ ಸಾಮಾನ್ಯ ತನ್ನ ಆಧ್ಯಾತ್ಮಿಕ ಸಾಧನೆ ಮಾಡಿಕೊಳ್ಳಲು ತುಂಬ ಸಹಾಯವಾಯಿತು.

ಬಸವಣ್ಣನವರ ವಚನಗಳಿಗೆ ಕನ್ನಡ ಸಾಹಿತ್ಯದಲ್ಲಿಯಲ್ಲದೆ ಜಗ ತ್ತಿನ ಅನುಭಾವಿಕಸಾಹಿತ್ಯದಲ್ಲಿಯೂ ಶ್ರೇಷ್ಠ ಸ್ಥಾನವಿದೆ. ಕನ್ನಡ ನುಡಿ ಯೊಡತಿಯನ್ನು ಸುವರ್ಣಶೃಂಖಲೆಯಿಂದ ಬಿಡಿಸಿದ ಹೆಚ್ಚುಗಾರಿಕೆ ವಚನ ಸಾಹಿತ್ಯದ್ದು. ಕನ್ನಡಭಾಷೆಗೆ ಹೊಸವ್ಯಾಪ್ತಿಯನ್ನು ನಿರ್ಮಿಸಿಕೊಟ್ಟು

ಅದನ್ನು ಬೈಬಲ್ಲಿನ ಇಂಗ್ಲಿಷ್, ಪೆನ್ಸೀಸ್ ಗ್ರಂಥದ ಫ್ರೆಂಚ್ ಭಾಷೆಗಳಂತೆ ಬಳಸಬಲ್ಲ ಮಾದರಿಯನ್ನು ತೋರಿಸಿಕೊಟ್ಟವರು ಬಸವೇಶ್ವರಾದಿ ವಚನಕಾರರು. ಶ್ರೀ. ಎಂ. ಆರ್. ಶ್ರೀನಿವಾಸಮೂರ್ತಿಗಳವರು ಹೇಳಿರುವಂತೆ (" ವಚನಗಳು ನಮ್ಮ ಕನ್ನಡ ಸಾಹಿತ್ಯದ ಉಪನಿಷತ್ತುಗಳು. ಆ ಕವಿಗಳು ನಮ್ಮ ಕನ್ನಡನಾಡಿನ ರಸಋಷಿಗಳು ಆ ರಸಋಷಿಗಳ ಉಪದೇಶಸಾರ: ಸಾಹಿತ್ಯವೇ ದರ್ಶನ, ದರ್ಶನವೇಸಾಹಿತ್ಯ ! ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ")

ಇಂಗ್ಲಿಷ್, ಫ್ರೆಂಚ್ ಸಾಹಿತ್ಯಗಳಲ್ಲಿ ದೊರೆಯುವ ಅನುಭವ ಸಾಹಿತ್ಯಕಿಂತ ಹತ್ತು ಪಾಲು ಹೆಚ್ಚು ಸಾಹಿತ್ಯ ವಚನಕಾರರಲ್ಲಿ ದೊರೆಯುತ್ತದೆ. ಗ್ರಂಥಪ್ರಮಾಣ, ಪಾಂಡಿತ್ಯ, ಕರ್ಮಾಚರಣೆಗಳೆಲ್ಲಕ್ಕಿಂತ ವಚನಕಾರರು ಅಂತರ್ವಾಣಿಗೆ ಹೆಚ್ಚು ಪ್ರಾಧಾನ್ಯಕೊಟ್ಟರು. ಅನುಭಾವದ ಒರೆಗಲ್ಲಿನ ಮೇಲೆ ಮಾನವ ಜೀವನದ ಆಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ ವ್ಯಾಪಾರಗಳನ್ನು ಪರೀಕ್ಷಿಸಿ ನೋಡಬೇಕೆಂಬುದು ಅವರ ದೃಢಮತವಾಗಿತ್ತು.

ತಮ್ಮ ಪ್ರತಿಯೊಂದು ಮಾತಿನಲ್ಲಿಯೂ ಬಸವಣ್ಣನವರು ಅನುಭವದ ಮಹತ್ವವನ್ನು ಸಾರಿದ್ದಾರೆ.

" ಅನುಭಾವವಿಲ್ಲದ ಭಕ್ತಿ ಅರಿವಿಂಗೆ ಬಾರದು,
ಅನುಭಾವವಿಲ್ಲದ ಸಂಗಮ ಸಮರಸಕ್ಕೆ ನಿಲುಕದು,
ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು,
ಅನುಭಾವವಿಲ್ಲದೆ ಏನೇನೂ ಅರಿಯಬಾರದು,
ತನ್ನಲ್ಲಿ ಸನ್ನಿಹಿತ ಉಳ್ಳೊಡೆ ಶಿವಶರಣರ ಸಂಗವೇತಕ್ಕೆನ
ಉಂಟೇ ?

ಕೂಡಲ ಸಂಗಮದೇವಯ್ಯ, ನಿಮ್ಮ ಅನುಭಾವ ಮಾತಿನ
ಮಥನವೆಂದು ನುಡಿಯಬಹುದೇ ಪ್ರಭುವೇ ?"

"ಗುರೂಪದೇಶ ಮಂತ್ರ ವೈದ್ಯ,
ಜಂಗಮೋಪದೇಶ ಶಸ್ತ್ರವೈದ್ಯ ನೋಡಯ್ಯ,

ಭವರೋಗವ ಕಳೆವ ಪರಿಯ ನೋಡಯ್ಯ,
ಕೂಡಲಸಂಗನ ಶರಣರ ಅನುಭಾವ ಮಡಿವಾಳನ
ಕಾಯಕದಂತೆ."

ಮಡಿವಾಳನ ಕೈಗೆ ಸಿಕ್ಕಿದ ವಸ್ತ್ರ ಶುಚಿಗೊಂಡು ಶುಭ್ರವಾಗುವಂತೆ ಶರಣರ ಅನುಭಾವಕ್ಕೆ ಸಿಕ್ಕಿದ ಮನ ಪರಿಶುದ್ಧವಾಗುತ್ತದೆ.

ಅನುಭಾವ ಆಡುವಷ್ಟು, ಮಾಡುವುದು ಸುಲಭವಲ್ಲ. ಅದರ ಬೇನೆ, ಬೇಸರಿಕೆ, ಬೇಗುದಿಗಳನ್ನು ಬಲ್ಲವನೇ ಬಲ್ಲ.

" ಅನುಭಾವ, ಅನುಭಾವವೆಂದೆಂಬಿರೆ,
ಅನುಭಾವವೆಂಬುದು ನೆಲದ ಮರೆಯ ನಿಧಾನ ಕಾಣರೋ,
ಅನುಭಾವವೆಂಬುದು ಅಂತರಂಗದ ರತ್ನ ಕಾಣಿರೋ,
ಅನುಭಾವವೆಂಬುದು ಶಿಶುಕಂಡ ಕನಸು ಕಾಣಿರೋ,
ಅನುಭಾವವೆಂಬುದು ರಚ್ಚೆಯ ಮಾತೇ ?
ಅನುಭಾವವೆಂಬುದು ಸಂತೆಯ ಸುದ್ದಿಯೇ ?
ಅನುಭಾವವೆಂಬುದು ಬೀದಿಯ ಪಸಾರವೇ ?
ಏನೆಂಬೆ ಹೇಳಾ ಮಹಾಘನವನು ?
ಆನೆ ಮಾನದೊಳಡಗುವುದೇ, ದರ್ಪಣದೊಳಡಗುವದಲ್ಲದೆ ?
ಕಂಡಕಂಡಲ್ಲಿ ಗೋಷ್ಠಿಯಾಗಿ, ನಿಂದಲ್ಲಿಯೇ ಅನುಭಾವ,
ಬಂದಬಂದಲ್ಲಿ ಪ್ರಸಂಗವ ಮಾಡುವ ಹಂದಿ ಕುನ್ನಿಗಳ
ನೇನೆಂಬನಯ್ಯ, ಕೂಡಲ ಸಂಗಮದೇವ."

ಅನುಭಾವದಿಂವಾಗುವ ಪರಿಣಾಮವನ್ನು 'ಅರಿವಿನ ತೃಪ್ತಿಗೆ ಅನುಭಾವವೇ ಆಶ್ರಯ. ಲಿಂಗಾನುಭಾವದಿಂದ ನಿನ್ನ ಕಂಡೆನ್ನ ಮರೆದು' ಎಂದು ವರ್ಣಿಸಿದ್ದಾರೆ. ಮಾನವ ಯಾವಾಗ ತಾನು ಯಾವದನ್ನು ಸ್ವಸ್ವರೂಪವೆಂದು ಭಾವಿಸಿದ್ದಾನೋ ಅದನ್ನು ಮರೆತು ತನ್ನ ನಿಜ ಸ್ವರೂಪದ ಅರಿವು ತಂದುಕೊಳ್ಳುತ್ತಾನೋ ಅದೇ ಅನುಭಾವ. ಅನುಭಾವ ಜಗತ್ತಿನ ಬೆಲೆಯನ್ನೇ ವ್ಯತ್ಯಸ್ತಮಾಡುತ್ತದೆ.

"ಅಯ್ಯಾ, ನಿಮ್ಮ ಅನುಭಾವದಿಂದ ಎನ್ನ ತನುವು ಹಾಳಾಯಿ
ತಯ್ಯ.
ನಿಮ್ಮ ಅನುಭಾವದಿಂದ ಎನ್ನ ಮನ ಹಾಳಾಯಿತಯ್ಯ.
ನಿಮ್ಮ ಅನುಭಾವದಿಂದ ಎನ್ನ ಕರ್ಮ ಛೇದನವಾಯಿತಯ್ಯ.
ನಿಮ್ಮವರು ಅಡಿಗಡಿಗೆ ಹೇಳಿ ಭಕ್ತಿ ಎಂಬ ಒಡವೆಯುವನು
ದಿಟಮಾಡಿ ತೋರಿದರು ಕಾಣಾ ಕೂಡಲಸಂಗಮದೇವಾ."

ವ್ಯಕ್ತಿಯ ಹೊರಮುಖವನ್ನು ಒಳಮುಖ ಮಾಡಿ, ಭಕ್ತಿ, ಜ್ಞಾನ, ವೈರಾಗ್ಯಗಳ ಸೂಚಕಾರ್ಥವನ್ನು ನಿತ್ಯವನ್ನಾಗಿಸುವ ಮಹಾಶಕ್ತಿ ಅನುಭಾವ. ಲಿಂಗ, ಜಂಗಮ, ಪ್ರಸಾದಗಳು ಹುಟ್ಟಿದುದೇ ಅನುಭಾವದಿಂದ ಎಂದು ಅಲ್ಲಮಪ್ರಭು ಒತ್ತಿಯೊತ್ತಿ ಹೇಳಿದ್ದಾನೆ. ಶ್ರೀಮಾನ್ ಉತ್ತಂಗಿ ಚೆನ್ನಪ್ಪನವರು ಹೇಳಿರುವಂತೆ "ವಚನ ವಾಙ್ಮಯವನ್ನು ಮನಃಶಾಸ್ತ್ರದೃಷ್ಟಿಯಿಂದ ನೋಡಿದರೆ ಅದರ ಮೂಲವು ಬೇರೊಂದು ಕಡೆಗಿರುವಂತೆ ಭಾಸವಾಗುತ್ತದೆ. ಕನ್ನಡದಲ್ಲಿ ಹೊಸದೊಂದು ಕವಿಮಾರ್ಗವನ್ನು ಕಲ್ಪಿಸಬೇಕೆಂಬ ಹವ್ಯಾಸವು ಇದಕ್ಕಿರಲಿಲ್ಲ. ಇದು ಬುದ್ಧಿಯಿಂದ ಯೋಚಿಸಿದ ಒಂದು ಯುಕ್ತಿಯಲ್ಲ. ಅನುಭಾವದಲ್ಲಿಯೇ ಇದರ ಮೂಲು ಜೀವಾತ್ಮ-ಪರಮಾತ್ಮರ ಅನ್ಯೋನ್ಯವೆಲ್ಲಿಯೋ ಅಲ್ಲಿಯೆ ಇದರ ಗಉಮ ಸ್ಥಾನ. ಸಂಯೋಗ, ಸಾಕ್ಷಾತ್ಕರ, ಸಾಮರಸ್ಯ. ಐಕ್ಯ,- ಮುಂತಾದ ಪದಗಳು ಈ ಅನ್ಯೋನ್ಯವನ್ನು ಕುರಿಯುವ ಪರ್ಯಾಯ ಶಬ್ದಗಳಾಗಿವೆ. ಜೀವೇಶ್ವರರ ಐಕ್ಯವು ನಿತ್ಯವೂ, ಅವಿರಳವೂ ಆಗಿದ್ದರೆ ಅನುಭವವು ಮೌನರೂಪವನ್ನು ತಾಳುವುದು. ಬಿಡುಬಿಡುವಾಗಿಯೂ ವಿರಳವಾಗಿಯೂ ಇದ್ದರೆ ವೈಖರಿಯ ರೂಪವನ್ನು ತಾಳುವುದು. ಈ ವೈಖರಿಯೇ ವಚನ ಶೈಲಿಯ ಮೂಲವು...ಇವುಗಳಿಗೆ ದೇಶ, ಕಾಲ, ವರ್ಣ, ಭಾಷೆ, ಲಿಂಗ ಮುಂತಾದ ಭೇದಗಳಿಲ್ಲ."

ಬಸವಣ್ಣನವರ ವಚನಗಳನ್ನು ವೀರಶೈವ ಅನುಭಾವ ಸಾಹಿತ್ಯದ ತಿರುಳು ಎಂದು ಭಾವಿಸುವುದರಲ್ಲಿ ಯಾವ ಅಡ್ಡಿಯೂ ಇಲ್ಲ. ಅವರ ಜೀವನ, ಉಪದೇಶ ಎರಡೂ ಅಪೂರ್ಣಮಾನವನನ್ನು ಪೂರ್ಣ

ಮಾನವನನ್ನಾಗಿ ಮಾಡುವುದಕ್ಕೆ ನಿವೇದಿತವಾಯಿತು. ವಸ್ತ್ರಾಭರಣಗಳ, ಉಪಾಧಿಕೂಡ ಇಲ್ಲದೆ ಪ್ರಕೃತಿಯಂತೆ ನಗ್ನವಾಗಿ ಮಗು ಹುಟ್ಟುತ್ತದೆ. ಆದಕ್ಕೆ ವಯಸ್ಸು ಬೆಳದಂತೆ, ಬುದ್ಧಿ ಕೂಡಿದಂತೆ ರಾಗ, ದ್ವೇಷ, ಆಸೆಯಾಮಿಷಗಳು ಬಂದು ಕೂಡಿಕೊಳ್ಳುತ್ತವೆ. ಆತ್ಮಕ್ಕೆ ವಿಸ್ಮೃತಿಯುಂಟಾಗಿ ಅದು ತನ್ನ ಸಹಜಪ್ರಭೆಯನ್ನು ಮರೆಸದಂತಾಗುತ್ತದೆ. ಈ ಸ್ಥಿತಿಯು ಮನವರಿಕೆಯೇ ವ್ಯಕ್ತಿ ಸಾಧಕನಾಗಿದ್ದಾನೆಂಬುದಕ್ಕೆ ಕುರುಹು.

" ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ
ವಿಚಾರಿಸಿದರೆ ಏನೂ ಹುರುಳಿಲ್ಲವಯ್ಯ
ಪ್ರಪಂಚಿನ ಡಂಭಿನಲ್ಲಿ ಎನ್ನದೊಂದು ರೂಪು ಮಾಡಿ
ನೀವಿರಿಸಿದರಯ್ಯಾ ಕೂಡಲ ಸಂಗಮದೇವಾ."

ಲೋಕದ ಬಾಳುವೆ 'ಕಪ್ಪೆ ಸರ್ಪನ ನೆಳಲಲ್ಲಿ ಇಪ್ಪಂತೆ' ಎಂದು ಭಾಸವಾಗುತ್ತದೆ. ಸಂಸಾರದಲ್ಲಿ ಏನೂ ಹುರುಳಿಲ್ಲ. ಅದೊಂದು ಗಾಳಿಯ ಸೊಡರು. ಸಿರಿಯೆಂಬುದೊಂದು ಸಂತೆಯ ಮಂದಿ, ಕಾಡ ಬೆಳದಿಂಗಳಿನಂತೆ ಅಸ್ಥಿರ. ಮಾನವ ಕೂಡಲಸಂಗಮದೇವನ ಪೂಜಿಸಿ ಕೇಡಿಲ್ಲದ ಪದವಿಯನ್ನು ದೊರಕಿಸಿಕೊಳ್ಳಬೇಕು.

ಈ ಪರಿಜ್ಞಾನವಾದೊಡನೆಯೇ ಭಕ್ತನ ಮನಸ್ಸಿನಲ್ಲಿ ಕಳವಳ ಹುಟ್ಟುತ್ತದೆ. ಸಂಸಾರವನ್ನಪ್ಪುವಷ್ಟು ಸುಲಭವಾಗಿ ಅಧ್ಯಾತ್ಮವನ್ನು ಅಪ್ಪುವುದು ಸಾಧ್ಯವಿಲ್ಲ. ಕೆಸರಲ್ಲಿ ಬಿದ್ದ ಪಶು ತೊಳಲಾಡುವಂತೆ ಭಕ್ತ ಪಂಚೇಂದ್ರಿಯ, ಸಪ್ತಧಾತುಗಳ ಉಪಟಳಕ್ಕೆ ಸಿಕ್ಕಿ ಧಾವತಿ ಪಡುತ್ತಾನೆ. ಇಹಲೋಕ ದುಃಖಿಯು, ಪರಲೋಕ ದೂರನ ಏಕೆ ಹುಟ್ಟಿಸಿದೆ ತಂದೆ ಎಂದು ಒರಲುತ್ತಾನೆ. ಅವನ ಹೃದಯದ ದಾರುಣವೇದನೆ ಪ್ರಾರ್ಥನಾ ರೂಪ ತಳೆಯುತ್ತದೆ.

"ಮೇರುಗುಣವನರಸುವುದೇ ಕಾಗೆಯಲ್ಲಿ
ಪರುಷ ಗುಣವನರಸುವುದೇ ಕಬ್ಬುನದಲ್ಲಿ
ಸಾಧುಗುಣವನರಸುವುದೇ ಅವಗುಣಿಯಲ್ಲಿ

ಚಂದನಗುಣವನರಸುವುದೇ ತರುಗಳಲ್ಲಿ
ಸರ್ವಗುಣಸಂಪನ್ನ ಲಿಂಗವೇ
ನೀನೆನ್ನಲ್ಲಿ ಅವಗುಣವನರಸುವುದೇ ಕೂಡಲ
ಸಂಗಮದೇವಾ."

ಭಕ್ತನ ಆತ್ಮೋತ್ಕ್ರಾಂತಿಗೆ ಅಡ್ಡಿಯಾಗಿರುವುದು ಅವನ ಹುಟ್ಟು, ಪದವಿ, ಸಂಪತ್ತುಗಳ ಮೋಹ. ಜೀವನದ ನಶ್ವರತೆ ಅರಿವಾಗುತ್ತ ಆಗುತ್ತ ಅವನಿಗೆ ತಿಳಿಯುತ್ತದೆ.

" ಎನಗಿಂತ ಕಿರಿಯರಿಲ್ಲ
ಶಿವಭಕ್ತರಿಗಿಂತ ಹಿರಿಯರಿಲ್ಲ
ನಿಮ್ಮ ಪಾದ ಸಾಕ್ಷಿ, ಎನ್ನ ಮನ ಸಾಕ್ಷಿ
ಕೂಡಲಸಂಗಮ ದೇವಾ, ಎನಗಿದೇ ದಿಬ್ಯ."

ಎಲ್ಲರಿಗಿಂತ ಹಿರಿಯನೆಂದು ಮೆರೆದು ಲೋಕದ ನಡೆಗೇಡಾಗುವುದಕ್ಕಿಂತ ಕಿರಿಯರಲ್ಲಿ ಕಿರಿಯನಾಗಿ ಎಲೆಯ ಮರೆಯ ಕಾಯಿಯಂತೆ ಇರುವುದೇ ಲೇಸೆಂದು ಅವನಿಗನಿಸುತ್ತದೆ.

" ಕಾಗೆ ವೃಷ್ಟಿಸುವ ಹೊನ್ನ ಕಳಶವಹುದರಿಂದ,
ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯ,
ಅಯ್ಯಾ ! ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ
ಮಾಡಯ್ಯ.

" ಕರ್ಮಾವಲಂಬನಕೇಚಿತ್ | ಕೇಚಿತ್ ಜ್ಞಾನಾವಲಂಬನಂ |
ವಯಂತು ಶಿವಭಕ್ತಾನಾಂ | ಪಾದುಕಸ್ಯಾವಲಂಬನಂ ||
ಕೂಡಲಸಂಗಮದೇವಾ, ನಿಮ್ಮ ಸೆರಗೊಡ್ಡಿ ಬೇಡುವ
ದೊಂದೇ ವರ ಕರುಣಿಸಯ್ಯ."

ಅರಸರ ಮನೆಯಲ್ಲಿ ಅರಸಿಯಾಗಿರುವುದಕ್ಕಿಂತ, ಭಕ್ತರ ಮನೆಯಲ್ಲಿ ತೊತ್ತಾಗಿರುವುದು ಲೇಸು. ಭಕ್ತರ ಮನೆಯಲ್ಲಿ ಭಗವಂತನ ಸೇವೆ ಮಾಡುವ ಅವಕಾಶವಾದರೂ ಸಿಕ್ಕುತ್ತದೆ.

ಒಡಲ ಕಳವಳದ ಅಗ್ನಿಪರೀಕ್ಷೆದಾಟಿದ ಭಕ್ತನ ಮನಸ್ಸಿನಲ್ಲಿ ನಿಷ್ಠೆ ದಾರ್ಢ್ಯ ಮೂಡುತ್ತದೆ. ಸುಖ ಬಂದರೆ ಪುಣ್ಯದ ಫಲವೆನ್ನುವುದಿಲ್ಲ, ದುಃಖ ಬಂದರೆ ಪಾಪದ ಫಲವೆನ್ನುವುದಿಲ್ಲ ಸುಖದುಃಖ ಲಾಭಾಲಾಭಾ ಜಯಾಪ ಜಯಗಳನ್ನು ಸಮಾನದೃಷ್ಟಿಯಿಂದ ನೋಡುವ ಚೈತನ್ಯ ಅರಳುತ್ತದೆ. ಭಕ್ತ ಶಪಥ ತೊಡುತ್ತಾನೆ.

"ಕಾಯದ ಕಳವಳಕ್ಕಂಜಿ ಕಾಯಯ್ಯ ಎನ್ನೆನು
ಜೀವನೋಪಾಯಕ್ಕಂಜಿ ಈಯಯ್ಯ ಎನ್ನೆನು
ಯದ್ಭಾವಂ ತದ್ಭವತಿ
ಉರಿ ಬರಲಿ, ಸಿರಿಬರಲಿ, ಬೇಕು ಬೇಡೆನ್ನೆನು
ಆನು ನಿಮ್ಮ ಹಾರೆನು, ಮಾನವರ ಬೇಡೆನು
ಆಣೆ ನಿಮ್ಮಾಣೆ ಕೂಡಲ ಸಂಗಮದೇವಾ."

ಭಕ್ತ ನಾನು, ನನ್ನದು ಎನ್ನುವ ಮಮಕಾರ ತೊರೆದು ತನುಮನ ಧನವನ್ನು ಗುರುಲಿಂಗ ಜಂಗಮಕ್ಕೆ ಅರ್ಪಿಸಬೇಕು. ಯಾವಾಗ ಅವನ ಮನಸ್ಸಿನಿಂದ ವಿಕಾರ, ಮಮಕಾರಗಳು ಮಾಯವಾಗುವವೋ ಆಗ ನಿರ್ಮಲವಾದ ದಿವ್ಯಜ್ಞಾನ ಹುಟ್ಟುತ್ತದೆ. ಹಲವು ಹೆಸರಿನಿಂದ ಕರೆಸಿ ಕೊಳ್ಳುವ ಭಗವಂತ ಒಬ್ಬನೇ ಆಗಿದ್ದಾನೆ. ಭಕ್ತ ಬಯಸಿದಂತೆ ಅವನು ಕಂಗೊಳಿಸುತ್ತಾನೆ ಆ ವಿರಾಟಮೂರ್ತಿ ಅಣುವಿನಲ್ಲಿ ಅಣುವಾಗಿಯೂ ಕಾಣಿಸಿಕೊಳ್ಳಬಲ್ಲ.

"ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ
ಅಗಮ್ಯ ಅಪ್ರಮಾಣ ಅಗೋಚರ ಅಪ್ರತಿಮ ಲಿಂಗವೇ.
ಕೂಡಲ ಸಂಗಮದೇವಯ್ಯ, ಎನ್ನ ಕರಸ್ಥಳಕ್ಕೆ ಬಂದು
ಚುಳುಕಾದಿರಯ್ಯ."

ಅಣುರೇಣು ತೃಣ ಕಾಷ್ಠಗಳಲ್ಲಿಯೂ ಸುಪ್ತವಾಗಿರುವ ಶಿವಸ್ವರೂಪವನ್ನರಿಯಬಲ್ಲ ಭಕ್ತ ಬೆಳಕೇ ಆಗುತ್ತಾನೆ. ಮಹಾಬೆಳಕಿನೊಂದಿಗೆ ಈ ಬೆಳಕು

ಉರಿಯಲ್ಲಿ ಕರ್ಪೂರ ಸೇರುವಂತೆ ಸೇರುತ್ತದೆ.

"ಬೆಳಕಿನೊಳಗಿನ ಬೆಳಗು, ಮಹಾಬೆಳಗೆಂಬ ಪ್ರಸಾದದಲ್ಲಿ
ಒದಗಿದ ಪ್ರಸಾದಿಯ ಪರಿಣಾಮದ ಪರಮಾನಂದವನೇ
ನೆಂದು ಉಪಮಿಸುವೆನಯ್ಯ. !"

ಇದು ಭಕ್ತನ ವೈಯಕ್ತಿಕ ಸಾಧನಮಾರ್ಗ. ಅವನು ಕೇವಲ ತನ್ನ ಆಧ್ಯಾತ್ಮಿಕ ಪ್ರಗತಿಯ ಕಡೆಗೇ ಲಕ್ಷ್ಯಕೊಟ್ಟು ಜಗತ್ತನ್ನು ಮರೆಯಲು ಸಾಧ್ಯವಿಲ್ಲ. ಸ್ವಾರ್ಥ ತಂದು ಹೊರೆಸುವ ಉತ್ತರವಾದಿತ್ವಕ್ಕಿಂತ ನಿಸ್ವಾರ್ಥ ತಂದು ಹೊರೆಸುವ ಉತ್ತರವಾದಿತ್ವ ಮಿಗಿಲಾದದ್ದು. ಜಗತ್ತಿನ ಗುರುಸ್ಥಾನದಲ್ಲಿ ತನ್ನ ಆತ್ಮವಿಕಾಸವೈಭವದಿಂದ ನಿಂತ ಭಕ್ತ ಲೋಗರನ್ನೂ ತನ್ನಂತೆಯೇ ಮಾರ್ಪಡಿಸಲು ಯತ್ನಿಸಬೇಕು ಆಗಲೇ ಅವನ ಋಣ ಪರಿಹಾರವಾಗುವುದು. ಮೊದಲು ತನ್ನ ಡೊಂಕನ್ನು ತಿದ್ದಿಕೊಂಡ ಮೇಲೆ ಲೋಕದ ಡೊಂಕನ್ನು ತಿದ್ದುವದಕ್ಕೆ ಅವನು ಕೈಹಾಕುತ್ತಾನೆ. ನಿತ್ಯಜೀವನವನ್ನು ದುರ್ಲಕ್ಷಿಸಿ ಎಲ್ಲರೂ ಅಧ್ಯಾತ್ಮ ಸಾಧನೆಗೆ ಹೊರಟರೆ ಲೋಕ ಹಾಳೂರಾಗುತ್ತದೆ. ಎಲ್ಲರೂ ಕೈಲಾಸಕ್ಕೆ ಧಾವಿಸುವುದಕ್ಕಿಂತ ತಾವಿರುವ ಲೋಕವನ್ನೇ ಕೈಲಾಸ ಮಾಡಿ ಪರಮೇಶ್ವರ ಇಲ್ಲಿಯೇ ಬಂದು ನೆಲಸುವಂತೆ ಮಾಡುವುದು ಲೇಸಲ್ಲವೇ? ಸತ್ಶೀಲ, ಸದಾಚಾರ, ಸತ್ಕ್ರಿಯೆಗಳ ಮೂಲಕ ಮಾನವ ಮಾನವಪುಂಗವನಾಗಬೇಕು. ಲೋಕವೇ ಕರ್ತಾರನ ಕಮ್ಮಟ. ಇಲ್ಲಿ ಸಲ್ಲುವರು ಅಲ್ಲೂ ಸಲ್ಲುವವರು. ಪರರಿಗೆ ಹಿಂಸೆಯಾಗದ ತೆರನಲ್ಲಿ ಮಾನವ ತನ್ನ ಜೀವನವನ್ನು ಅಳವಡಿಸಿಕೊಂಡು ಅದರಲ್ಲಿ ಆದ್ಯವಾದುದು ಯಾವದು, ಅನಾದ್ಯವಾದುದು ಯಾವದು, ಬಂಧನ ಯಾವುದರಿಂದ ಬಿಡುಗಡೆ ಯಾವದರಿಂದ ಎಂಬ ವಿವೇಚನೆ ಬೆಳಸಿಕೊಂಡರೆ ಸಾಕು. ನಡೆನುಡಿಯನ್ನು ಚೆನ್ನಾಗಿಟ್ಟುಕೊಂಡು, ಸಕಲ ಪ್ರಾಣಿಕೋಟಿಯಲ್ಲಿಯೂ ದಯೆ ತಳೆದು, ಸದ್ಗುಣವೆಂಬ ಫಲವ ಬಿತ್ತಿ ಬೆಳೆದು, ತೆರೆಹಿಲ್ಲದ ಸ್ವಾನುಭವಸುಖದಲ್ಲಿ ಆಸಕ್ತನಾದರೆ ಅದೇ ಕೈವಲ್ಯ; ಅದೇ ಕೈಲಾಸ.

ಬಸವಣ್ಣನವರ ವಚನಗಳೆಲ್ಲಾ ಪರತತ್ತ್ವವನ್ನು ಮಾನವ ಕೋಟಿಯ ಕೈಗೆ ನಿಲುಕಿಸುವುದಕೆ ನಿವೇದಿತವಾಗಿವೆ ಮಾನವ ಕೋಟಿಯು

ಕೋಟಲೆಗಳನ್ನು ನಿರ್ಲಕ್ಷಿಸಿ ಉದಾತ್ತ ವೇದಿಕೆಯ ಮೇಲೆ ನಿಂತು ಸ್ವಪ್ರೌಢಿಮೆಯನ್ನು ಮೆರೆಸುತ್ತಾ ಬಸವಣ್ಣನವರು ಧರ್ಮಬೋಧೆ ಮಾಡಲಿಲ್ಲ. ಅಸತ್ಯದಿಂದ ಸತ್ಯಕ್ಕೆ ಮೃತ್ಯುವಿಂದ ಅಮೃತತ್ತ್ವಕ್ಕೆ ಜೀವ ಧಾವಿಸುವಾಗ ಪಡುವ ಎಲ್ಲಾ ಸಂಕಟ, ಕ್ಲೇಶಗಳನ್ನು ಅನುಭವಿಸಿ, ನಿಷ್ಠೆಯೊಂದಿದ್ದರೆ ಮಾನವ ಅವುಗಳನ್ನು ಕಡೆಹಾಯ್ದು ಅಮೃತಪುತ್ರನಾಗ ಬಹುದೆಂಬುದನ್ನು ನಡೆಯಿಂದ ತೋರಿಸಿಕೊಟ್ಟರು. ಅದಕ್ಕೇ ಅವರ ನುಡಿಯಲ್ಲಿ ಸತ್ಯದ ವಿದ್ಯುತ್ಪ್ರಭೆಯೂ, ವಸಂತದ ಚೇತೋಹಾರಿತ್ವವೂ, ತಾಯಿ ಹಾಲಿನ ತನಿರುಚಿಯೂ ಅಡಕವಾಗಿದೆ. ನಡೆ, ನುಡಿಯ ಸಂಬಂಧ ವನ್ನು ಅವರೇ ಸ್ಪಷ್ಟವಾಗಿ ವರ್ಣಿಸಿದ್ದಾರೆ.

"ನುಡಿದರೆ ಮುತ್ತಿನ ಹಾರದಂತಿರಬೇಕು.
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು.
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು.
ನುಡಿದರೆ ಲಿಂಗಮೆಚ್ಚಿ ಅಹುದೆನಬೇಕು.
ನುಡಿಯೊಳಗೆ ನಡೆಯುದಿದ್ದರೆ ಕೂಡಲಸಂಗಮದೇವನೆಂ
ತೊಲಿವನಯ್ಯ"

ಜನತೆಗೆ ಮುಡಿಪಾದ ಬಸವಣ್ಣನವರ ಜೀವನ ಲೋಕಕ್ಕೆ ಮಾದರಿಯಾಗಿದೆ; ಅವರ ವಚನಗಳು ಜಿಜ್ಞಾಸುಗಳಿಗೆ, ಮುಮುಕ್ಷುಗಳಿಗೆ, ಸಾಹಿತ್ಯೋಪಾಸಕರಿಗೆ ಮಣಿದೀಪಗಳಂತಿವೆ. ಹರಿಹರ ಕವಿ ಹೇಳಿದಂತೆ 'ಬಸವನ ಮಾತೆ ಮಾತು; ಬಸವನ ಬಿಂಕದ ಭಾಷೆ ಭಾಷೆ'— ಏಕೆಂದರೆ—'ಬಸವನ ರೀತಿ, ನಿಷ್ಠೆ, ಬಟ್ಟೆ, ಬುದ್ಧಿ, ಪೆರ್ಮೆ, ಆತ್ಮೋಪಮವಾದ ರೀತಿ, ನಿಷ್ಠೆ, ಬುದ್ಧಿ ಪೆರ್ಮೆಗಳಾಗಿವೆ.

# ಸಂಸ್ಕೃತಿಯೆಂದರೇನು ?

ಇಂದು ನಮ್ಮ ದೇಶದ ರಾಜಕೀಯ ಪರಿಸ್ಥಿತಿ ಬದಲಾಗಿದೆ. ನಮ್ಮ ದಾಸ್ಯ ನೀಗಿದೆ. ಜಗತ್ತಿನ ಇತರ ರಾಷ್ಟ್ರಗಳ ಸರಿಸಮನಾಗಿ ತಲೆಯೆತ್ತಿ ನಿಲ್ಲಲು ನಾವು ಸಮರ್ಥರಾಗಿದ್ದೇವೆ. ನಮ್ಮ ಜೀವನದ ಅನೇಕ ವಿಷಯಾರ್ಸಗಳನ್ನು ತೊಡೆದುಹಾಕಿ ಸರ್ವಾಂಗಸುಂದರವಾದ, ಆದರ್ಶವಾದ ಜೀವನಸೌಧ ಕಟ್ಟಲು ನಾವು ಉದ್ಯುಕ್ತರಾಗಿದ್ದೇವೆ.

ಸ್ವಾತಂತ್ರ್ಯ ನಮ್ಮ ಮೇಲೆ ಹೆಚ್ಚಿನ ಜವಾಬ್ದಾರಿಯನ್ನು ಹೊರೆಸಿದೆ. ಪರಂಪರೆಯ ತಂತುವನ್ನು ಕಡಿದುಹಾಕಿ ನಾವು ಪರಂಪರಾಗತ ಜೀವನವನ್ನು ಮರೆಹೊಗಲು ಅಸಮರ್ಥರಾಗಿದ್ದೇವೆ ; ಶತಮಾನಗಳ ಪರಾಧೀನತೆಯಿಂದ ಕಲಿತ ವಿಷಯಗಳನ್ನು ಜೀವನದಲ್ಲಿ ಸಮರಸ ಮಾಡಿಕೊಳ್ಳಲೂ ಅಸರ್ಮಥರಾಗಿದ್ದೇವೆ. ಇಂದು ನಾವು ಭಾರತದ ಭವ್ಯತೆಗೊಪ್ಪುವ ಹೊಸ ಜೀವನವನ್ನೇ ಕಂಡುಹಿಡಿಯಬೇಕಾಗಿದೆ. ಅಂಥ ಜೀವನಕ್ಕೆ ನಮ್ಮ ಆರ್ಥಿಕ, ಔದ್ಯೋಗಿಕ, ಕೈಗಾರಿಕಾ ದಾಸ್ಯ ನಿರ್ಮೂಲನ ಹೇಗೆ ಅಗತ್ಯವೋ ಹಾಗೆ ಮಾನಸಿಕ ದಾಸ್ಯ ನಿರ್ಮೂಲನವೂ ಅತ್ಯಗತ್ಯ. ಸ್ವಾತಂತ್ರ್ಯ ಬಂದರೂ ನಾವು ಸ್ವತಂತ್ರರಾಗಿಲ್ಲ. ಸ್ವಾತಂತ್ರ್ಯದ ನಿರ್ಮಲಪ್ರಭೆ ಇನ್ನೂ ನಮ್ಮ ಜೀವನದ ಮೇಲೆ ಪರಿಣಾಮಮಾಡಿಲ್ಲ. ನಮ್ಮ ಆಳರಸರು ಬಿಟ್ಟು

ಹೋಗಿರುವ ವಿಚಾರ, ಸಂಸ್ಥೆಗಳು, ಕಟ್ಟುಕಾಯಿದೆಗಳು, ವಿಲೋಭನೆಗಳಿಗೆ ನಾವು ಅಶೋಕಧ್ವಜದ ಮುದ್ರೆಯೊತ್ತಿ ಬಳಸುತ್ತಿದ್ದೇವೆ.

ಪ್ರಾಯಶಃ ಇಂತಹ ಸಂಧಿಕಾಲದಲ್ಲಿ ಈ ಬಗೆಯ ವಿಪರ್ಯಾಸ ಅನಿವಾರ್ಯವೆಂದು ಕಾಣುತ್ತದೆ. ನಮ್ಮನ್ನು ನಾವು ಕಂಡುಕೊಳ್ಳುವುದಕ್ಕೆ ಕೆಲವುಕಾಲ ಹಿಡಿಯಬಹುದು ಆದರೆ ಈ 'ಅನುಕರಣಪರಿಸ್ಥಿತಿ' ಬೇಗ ನಿವಾರಣೆಯಾಗಬೇಕೆಂಬ ಉತ್ಕಟಾಕಾಂಕ್ಷೆ ಎಲ್ಲರ ಮನದಲ್ಲಿ ಮೂಡಬೇಕು. ನಮ್ಮ ನಾಡಿನ ಘನತೆಯನ್ನು ವಿಸ್ತರಿಸಿ, ಅದನ್ನು ಭದ್ರವಾದ ಬುನಾದಿಯ ಮೇಲೆ ನಿಲ್ಲಿಸುವುದರ ಕಡೆಗೆ ಎಲ್ಲರ ಲಕ್ಷ್ಯ ಹೋಗಬೇಕು.

ದೇಶದ ರಾಜಕಾರಣ, ಸಂಸ್ಕೃತಿ ಎರಡೂ ಹಾಸುಹೊಕ್ಕಾಗಿವೆ. ಅಶೋಕ, ವಿಕ್ರಮಾದಿತ್ಯ, ಪುಲಕೇಶಿ, ಕೃಷ್ಣದೇವರಾಯ ಇವರ ರಾಜಕಾರಣ ಸಂಸ್ಕೃತಿಯ ಒಂದಂಗವಾಗಿತ್ತು. ದೇಹದ ಸಮಸ್ತ ಅವಯವಗಳೂ ಪ್ರಮಾಣಬದ್ಧವಾಗಿ ಬೆಳೆಯುವಂತೆ ರಾಜಕಾರಣ, ಧರ್ಮ, ಸಂಸ್ಕೃತಿಗಳು ಬೆಳೆಯುತ್ತಿದ್ದವು. ಆ ಅರಸರು ನಮಗೆ ಕಾಳಿದಾಸನಂಥ ಕವಿಸಾರ್ವಭೌಮನನ್ನೂ, ಬಾದಾಮಿಯಂಥ ಶಿಲ್ಪಸಾಮ್ರಾಜ್ಯವನ್ನೂ ಬಿಟ್ಟುಹೋಗಿದ್ದಾರೆ. ಅವರು ಬೆಳಸಿದ ರಾಜ್ಯಗಳು, ಸಂಗ್ರಹಿಸಿದ ಅಪಾರ ಧನ ಸಂಪತ್ತು ಇಂದು ಹೇಳ ಹೆಸರಿಲ್ಲವಾಗಿವೆ. ಆದರೆ ಅಜಂತಾ, ಬೇಲೂರು, ಐಹೊಳೆ, ಶಾಸನಗಳು, ಕವಿಕೃತಿಗಳು ಅಮರವಾಗಿ ಉಳಿದಿವೆ. ನಮ್ಮ ಪ್ರಾಚೀನರು ನಮ್ಮ ಕೈಯಲ್ಲಿಟ್ಟು ಹೋದುದನ್ನು ಉಳಿಸಿಕೊಳ್ಳುವುದಷ್ಟೇ ಸಾಲದು, ಅದನ್ನು ಬೆಳಸಿ, ಒಂದನ್ನು ನೂರುಮಾಡಿ ನಮ್ಮ ತರುವಾಯದವರ ಕೈಯಲ್ಲಿಡಬೇಕಾದುದು ನಮ್ಮ ಕರ್ತವ್ಯ.

ಸಂಸ್ಕೃತಿಯ ಬೆಳವಣಿಗೆಯನ್ನು ಲಕ್ಷಿಸಿ ಅದರ ಹಿಂಬದಿಯಲ್ಲಿ ಹುಟ್ಟುವ ಕೆಲವು ಸಮಸ್ಯೆಗಳನ್ನು ಗಮನಿಸುವುದಕ್ಕೆ ಮುಂಚೆ 'ಸಂಸ್ಕೃತಿ' ಎಂದರೇನು ಎಂಬುದನ್ನು ನಾವು ಮೊದಲು ಖಚಿತಪಡಿಸಿಕೊಳ್ಳಬೇಕು.

'ಸಂಸ್ಕೃತಿ' ಶಬ್ದವನ್ನು ನಾನಾ ಸಂದರ್ಭಗಳಲ್ಲಿ, ನಾನಾ ವಿಷಯಗಳಿಗನ್ವಯಿಸಿ ನಾವು ಉಪಯೋಗಿಸುತ್ತ ಬಂದಿದ್ದೇವೆ. ಇಷ್ಟು ವ್ಯಾಪಕಾರ್ಥ ಪಡೆದಿರುವ ಇನ್ನೊಂದು ಶಬ್ದ ಸಂಸ್ಕೃತ ನಿಘಂಟಿನಲ್ಲಿ ದೊರೆಯುವುದು ದುರ್ಲಭ. ಸಂಸ್ಕೃತಿಯನ್ನು ನಾವು ದೇಶವಾಚಕವಾಗಿ ಉಪ

ಯೋಗಿಸುತ್ತಿದ್ದೇವೆ. ಉದಾ: ಭಾರತೀಯ ಸಂಸ್ಕೃತಿ, ಕರ್ನಾಟಕ ಸಂಸ್ಕೃತಿ, ಮಹಾರಾಷ್ಟ್ರ ಸಂಸ್ಕೃತಿ, ಕೆಲ್ಟಿಕ್ ಸಂಸ್ಕೃತಿ ಇತ್ಯಾದಿ. ಅದನ್ನು ಭಾಷಾವಾಚಕವಾಗಿ ಉಪಯೋಗಿಸುತ್ತಿದ್ದೇವೆ. ಉದಾ: ಕನ್ನಡ ಸಂಸ್ಕೃತಿ, ಇಂಗ್ಲಿಷ್ ಸಂಸ್ಕೃತಿ, ತಮಿಳು ಸಂಸ್ಕೃತಿ ಇತ್ಯಾದಿ. ಅದನ್ನು ಮತ, ಧರ್ಮಗಳ ಸೂಚಕವಾಗಿಯೂ ಉಪಯೋಗಿಸುತ್ತಿದ್ದೇವೆ. ಉದಾ: ವೀರಶೈವ ಸಂಸ್ಕೃತಿ, ವೈದಿಕ ಸಂಸ್ಕೃತಿ, ಇಸ್ಲಾಂ ಸಂಸ್ಕೃತಿ, ಜೈನ ಸಂಸ್ಕೃತಿ ಇತ್ಯಾದಿ. ಹಾಗಾದರೆ ಸಂಸ್ಕೃತಿ ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವೇನು? ಒಂದು ಮತ, ಒಂದು ಧರ್ಮ, ಒಂದು ಕಲೆ; ಒಂದು ಭಾಷೆಯನ್ನೇ ಸಂಸ್ಕೃತಿಯೆಂದು ಹೇಳಬಹುದೇ?

'ಸಂಸ್ಕೃತಿ' ಶಬ್ದಕ್ಕೆ ಸೂತ್ರರೂಪವಾಗಿ ಅರ್ಥಹೇಳುವುದು ಸಾಧ್ಯವಿಲ್ಲ. ಟಿ. ಎಸ್. ಈಲಿಯಟ್ಟರು ಹೇಳುವಂತೆ 'ಅದಕ್ಕೆ ನಾಮ ರೂಪಗಳಿಲ್ಲ. ಅದು ಒಂದು ಅನುಭವ.' ವಿಚಾರಶೀಲರು ಸಂಸ್ಕೃತಿಯ ಬಗ್ಗೆ ಮಾಡಿರುವ ವ್ಯಾಖ್ಯಾನಗಳನ್ನು ಗಮನಿಸಿದರೆ ನಮಗೆ ಬೆಳಕು ತೋರಬಹುದು.

("ಮನುಷ್ಯ ತನಗೆ ಸಂಬಂಧಪಡುವ ವಿಷಯಗಳೆಲ್ಲಾ, ಇದುವರೆಗೆ ಜಗತ್ತಿನಲ್ಲಿ ನಡೆದಿರುವ ವಿಚಾರಧಾರೆಯನ್ನರಿತುಕೊಂಡು ಪೂರ್ಣತ್ವವನ್ನರಸುವುದೇ ಸಂಸ್ಕೃತಿ.")* ವೈಯಕ್ತಿಕ ವಿಕಾಸವೇ ಸಂಸ್ಕೃತಿಯೆಂದು ಮ್ಯಾಥ್ಯೂ ಆರ್ನಾಲ್ಡರು ಅಭಿಪ್ರಾಯ ಪಡುತ್ತಾರೆ. ಒಂದು ದೇಶ, ಸಮಾಜದಲ್ಲಿ ಹತ್ತು ಜನ ಪ್ರತಿಭಾಶಾಲಿಗಳಿದ್ದ ಮಾತ್ರಕ್ಕೇ ಅದು ಸಂಸ್ಕೃತವಾಗಿದೆಯೆಂದು ಹೇಳುವುದಕ್ಕಾಗುವುದಿಲ್ಲ.

ತಮ್ಮ 'ಡಿಕೆಡೆನ್ಸ್" (*Decadence*) ಗ್ರಂಥದಲ್ಲಿ ಸಿ. ಇ. ಎಂ. ಜೋಡರು ಸಾಂಸ್ಕೃತಿಕ ಅವನತಿಗೆ ಎರಡು ಕಾರಣಗಳನ್ನು ಸೂಚಿಸಿದ್ದಾರೆ. ಅವರು ವೈಯ್ಯಕ್ತಿಕ ವಿಕಾಸಕ್ಕೆ ಹೆಚ್ಚು ಬೆಲೆ ಕೊಡುವುದೇ ಅವನತಿಯ

---

* "... . Culture being a persuit of our total perfection by means of getting to know, on all matters which most concern us, the best which has been thought and said in the world.....And the Culture we recommend is, above all, an inward operation."

Mathew Arnold in *CULTURE AND ANARCHY*

ಚಿನ್ಹೆ ಎಂದು ಅಭಿಪ್ರಾಯ ಪಡುತ್ತಾರೆ. ಅನುಭಾವವನ್ನು ಅನುಭಾವಕ್ಕಾಗಿಯೇ ದೊರಕಿಸಿಕೊಳ್ಳುವುದರಲ್ಲಿ ಅರ್ಥವಿಲ್ಲ. ಅದಕ್ಕೊಂದು ಭವ್ಯ ಆದರ್ಶವಿರಬೇಕು. ಆ ಆದರ್ಶಕ್ಕೆ ಅನುಭಾವವೂ ಅಧೀನವಾಗಿರಬೇಕು. ಕಾರಣಗಳೇನೆಂದರೆ (೧) ವ್ಯಕ್ತಿಯಾಗಲಿ ಮಾನವವರ್ಗವಾಗಲಿ ಪರಿಪೂರ್ಣವಾಗಿಲ್ಲ. (೨) ಪರಿಣಾಮವಾದದಿಂದ ಮಾನವವಿಕಾಸವಾಗುತ್ತದೆಯೆಂಬ ಮಾತು ದಿಟವಲ್ಲ. ಪರಿಣಾಮವಾದಾತೀತವಾದ ಒಂದು ಮಾನದಂಡವಿರಬೇಕು. ಆ 'ಅತೀತವಸ್ತು' ಗುರಿಯನ್ನು ನಿರ್ದೇಶ ಮಾಡಿ, ಅತ್ತ ಮಾನವ್ಯವನ್ನು ಒಯ್ಯುಬೇಕು. (೩) ಪಾರಮಾರ್ಥಿಕ ಜಗತ್ತಿನ ಇರುವನ್ನು ಮಾನವ ಗುರುತಿಸಿ, ಅದರ ಸಂಬಂಧವನ್ನು ಬೆಳಸಲು ಸತತವಾಗಿ ಪ್ರಯತ್ನಿಸಿದರೆ, ಮಾನವನ ಮನಸ್ಸು ಜ್ಞಾನಮಾರ್ಗದಲ್ಲಿ ಮುಂದಡಿಯಿಡುತ್ತದೆ, ಮಾನವನ ಗುಣ ಒಳ್ಳೆಯದರಕಡೆ ಧಾವಿಸುತ್ತದೆ, ಅವನ ಅಂತರಾತ್ಮ ಸೌಂದರ್ಯಾನುಭೂತಿ ಪಡೆಯುತ್ತದೆ. ಮಾನವಾತೀತ ವಸ್ತುವಿನ ಸಂಬಂಧದಿಂದಲೇ ನಮ್ಮ ಭಾವನೆ, ವಿಚಾರ, ನೀತಿ ಕಲೆಗಳು ಸುಧಾರಿಸುವುದು *

---

* "1) That perfection is not to be found in the human or in any possible development of the human. 2) That the notion of human development through the process of evolution in time is meaningless, unless there is something other than the evolution process to serve both as a standard of measure, and as a goal or end to direct its advance. This 'something' I take to be the immaterial world of value 3) That it is only in so far men accept the existence of this immaterial world in their theory and seek to increase the degree of their awareness of and contact with it in their practice, that the human mind advances in respect of knowledge, the human character in respect of the perception and love of beauty In other words, it is in the knowledge of and intercourse with non-human values that we shall find the receipe of good thinking, for good morals and for good art."

C. E. M. Joad in *Decadence*

ಶಿಷ್ಟ ಸಂಪ್ರದಾಯ, ನಾಗರೀಕ ಜೀವನಗಳೇ ಸಂಸ್ಕೃತಿಯೆಂದು ಭಾವಿಸಿದ ವ್ಯಾಥ್ಯೂ ಆರ್ನಾಲ್ಡರ ವಿಚಾರವಾಹಿನಿಗಿಂತ ಬಹಳ ಮುಂದೆ ಹೋಗಿದೆ ಜೋಡ್, ಈಲಿಯಟ್, ಪವಿಸ್‌ರವರ ಅಭಿಪ್ರಾಯ. ಇಹ ಲೋಕದ ಸೌಖ್ಯವನ್ನು ಹೆಚ್ಚಿಸುವುದಷ್ಟೇ ಸಂಸ್ಕೃತಿಯಲ್ಲ. ಇಹಲೋಕದ ಸೌಖ್ಯವನ್ನರಸುವ ಮಾನವ ಮತ್ತಷ್ಟು ಉಪಾಧಿಗಳನ್ನು ತನ್ನ ಮೇಲೆ ಹೇರಿಕೊಳ್ಳುತ್ತಾನೆ. ಮಾನವನ ಗುರಿ ಸಾವು, ಜೀವಗಳ ಸಮಸ್ಯೆಯನ್ನು ಬಿಡಿಸುವುದಾಗಿರಬೇಕು. ಪವಿಸ್‌ರವರ ನಿರ್ಧಾರವನ್ನು* ನಾವು ಒಪ್ಪಿ ಕೊಂಡರೆ ಕಠೋಪನಿಷತ್ತಿಗೆ ಹೆಚ್ಚು ಮಾನ್ಯತೆ ಕೊಡಬೇಕಾಗುತ್ತದೆ.

ಉಮರ್ ಖಯ್ಯಾಂ ಪವಿಸ್‌ರವರ ಅಭಿಪ್ರಾಯವನ್ನೇ ಬಿಡಿಸಿ ಹೇಳಿದ್ದಾನೆ

"ನೀನು ಯಾರು? ನೀನು ಎಲ್ಲಿಂದ ಬಂದೆ?
ಇಲ್ಲೇನು ಮಾಡುತ್ತಿರುವೆ? ನಿನ್ನ ಮುಂದಿನ ಠಾಣ ಯಾವದು?"

ಈ ನಾಲ್ಕು ಪ್ರಶ್ನೆಗಳನ್ನು ಬಿಡಲೆತ್ನಿಸು ಎಂದು ಕೋಟಿ ಹಾಕಿದ್ದಾನೆ.

ಸಂಸ್ಕೃತಿಯ ಅಂತರಂಗವನ್ನು ಒಳಹೊಕ್ಕು ಅದರ ಸ್ವರೂಪದ ಆವಿಷ್ಕಾರ ಮಾಡ ಹೊರಟಿರುವ ಟಿ. ಎಸ್. ಈಲಿಯಟ್ಟರು† ವ್ಯಕ್ತಿ, ವರ್ಗ

---

* "For Culture has at least this—that it reconciles us to the two destinies, both the inward and outward, and resigns us to that final shock of death, which brings these two incomprehensible things together; brings them together on the brink of a third thing, more incomprehensible still, the great Perhaps of silence."

John Cowper Powys in *The Meaning of Culture*

† A class division of society planned by an absolute authority would be artificial and intolerable; a decentralisation under central direction would be a contradiction; an ecclesiastical unity cannot be imposed in the hope that it will bring about unity of faith, and a religious diversity cultivated for its own sake would be absurd.....Culture is the one thing that we cannot deliberately aim at. It is the product of a variety of more or less harmonious activities, each persued for its own sake."

T. S. Eliot in *Notes Towards the Definition of Culture*

ಸಮಾಜಕ್ಕೆ ಸಂಸ್ಕೃತಿ ಹೇಗೆ ಅನ್ವಯವಾಗುತ್ತದೆಂದು ಚರ್ಚೆ ಮಾಡಿದ್ದಾರೆ. ವ್ಯಕ್ತಿ, ವರ್ಗ ಸಮಾಜಗಳು ಪರಸ್ಪರ ಅನುವರ್ತಿಗಳು ; ಒಂದನ್ನು ಬಿಟ್ಟು ಒಂದರ ಬೆಳವಳಿಗೆ ಸಾಧ್ಯವಿಲ್ಲ. ಸಾಮಾಜಿಕ ಪ್ರಗತಿಗೆ ವರ್ಗಭೇದ ಅವಶ್ಯಕವೆಂದು ಅವರ ವಾದ. ಆದರದು ಯಾರ ಬಲವಂತಕ್ಕೂ ಸಿಕ್ಕಿ ರೂಪಗೊಳ್ಳಬಾರದು. ಸ್ವಭಾವಜನ್ಯವಾಗಿರಬೇಕು.*

ಒಂದು ದೇಶದ ಸಂಸ್ಕೃತಿಯ ಮಾನದಂಡ ಅದರ ಧಾರ್ಮಿಕ ಭಾವನೆ, ಕಲ್ಪನೆಗಳೆಂಬ ನಿರ್ಧಾರಕ್ಕೆ ಈಲಿಯಟ್ ಬಂದಿದ್ದಾರೆ. ಜೀವನವನ್ನು ನೋಡುವ ಪರಿಪೂರ್ಣ ಮಾರ್ಗ ಧರ್ಮ. ಧರ್ಮ ಸಂಸ್ಕೃತಿಗೆ ಒಂದು ಚೌಕಟ್ಟನ್ನು ಕಲ್ಪಿಸಿಕೊಟ್ಟು, ಮಾನವತೆಯನ್ನು ನಿರ್ವಿಣ್ಣತೆಯಿಂದ, ಆಲಸ್ಯದಿಂದ ಕಾಪಾಡುತ್ತದೆ. ಎಲ್ಲ ಧರ್ಮಗಳಿಗೂ ಸಮ್ಮತವಾಗುವ, ವಿಶ್ವಕ್ಕೇ ಅನ್ವಯವಾಗುವ ತತ್ತ್ವಗಳನ್ನು ಯಾವ ಧರ್ಮ ಪ್ರತಿಪಾದಿಸುತ್ತದೋ ಅದೇ ವಿಶ್ವಧರ್ಮವೆಂದು ಅವರು ಹೇಳಿದ್ದಾರೆ.

ಕಾಲವನ್ನು ಗೆಲ್ಲುವುದು, ವೇಗವನ್ನು ಹೆಚ್ಚಿಸುವುದು, ಯಂತ್ರ ಸಾಮಗ್ರಿಗಳ ಮೂಲಕ ಮಾನವನ ದುಡಿಮೆಯನ್ನು ಕಡಿಮೆಮಾಡಿ ಅವನ ಇಹಜೀವನಕ್ಕೆ ಹೆಚ್ಚಿನ ಸೌಖ್ಯವನ್ನು ತಂದುಕೊಡುವುದೇ ಸಂಸ್ಕೃತಿಯೆಂದು ಬಗೆದಿದ್ದ ಪಾಶ್ಚಾತ್ಯ. ಜಗತ್ತು ಇಹಜೀವನದ ನಶ್ವರತೆಯನ್ನು

* "... we can see a religion as the *whole way of life* of a people from birth to the grave, from morning to night and even sleep and that way of life has also its culture. And at the same time we must recognise that when this identification is complete, it means in actual societies both an inferior culture and an inferior religion. A Universal religion is at least potentially higher than one which any race or nation claims exclusively for itself; and a culture realising a religion also realised in other cultures is at least potentially a higher culture than one which has a religion exclusively to itself.........any religion, while it lasts, and on its own level, gives an apparent meaning to life, provides the frame work for a culture, and protects the mass of humanity from boredom and despair."

T. S. Eliot in *Notes towards the definition of Culture*

ಕಂಡುಕೊಂಡು ಅವಿನಾಶಿಯಾದ, ನಿತ್ಯ ತತ್ವಗಳನ್ನರಸುವುದಕ್ಕೆ ಹೊರಟಿರುವುದನ್ನು ನಾವು ಕಾಣಬಹುದು. ಭಾರತದ ನೋಟ ಹೊರಮುಖವಾಗುತ್ತಿರುವಂತೆ ಪಾಶ್ಚಾತ್ಯ ಜಗತ್ತಿನ ನೋಟ ಒಳಮುಖವಾಗುತ್ತಿದೆ.

ಪಾಶ್ಚಾತ್ಯ ಜಗತ್ತು ಇಷ್ಟು ದಿವಸ ಪ್ರಾಪಂಚಿಕ ಜೀವನದ ಪರಿಪೂರ್ಣತೆಯ ಕಡೆ ನೋಡಿತು. ಅದರ ವಿಜ್ಞಾನ, ಕಲೆ ಅದಕ್ಕೆ ವಿ ಾಸಲಾಯಿತು. ಅವರ ಚರ್ಚುಗಳು ಈ ಭೋಗಜೀ ಪ್ರತೀಕಗಳಾದವು. ಅವರ ಸಾಧನೆ ಆಟಂ-ಬಾಂಬಿನ ಶೋಧನೆಯ ವರೆಗೆ ಹೋಯಿತು. ಮುಂದೇನು ? ಮಾನವನ ಪೈಶಾಚಿಕ ವೃತ್ತಿಯ ಪೂರ್ಣರೂಪ ಹೊರಬಿದ್ದಂತಾಯಿತು ? ನಾಲ್ಕಾರು ಆಟಂ ಬಾಂಬುಗಳಿಂದ ಜಗತ್ತನ್ನು ನಾಶಮಾಡುವುದು ತಾನೆ ಉಳಿದಿರುವುದು ? ಯುದ್ಧವಿರೋಧಿಗಳಾದ ಪಾಶ್ಚಾತ್ಯ ದಾರ್ಶನಿಕರು, ಕವಿಗಳು ಈ ಬಗ್ಗೆ ಜನಗಳನ್ನೆಚ್ಚರಿಸಿದರು ರೋಮೆ ರೋಲಾ ಅವರು 'ಯೂರೋಪ್ ವ್ಯಾಧಿಗ್ರಸ್ತವಾಗಿದೆ. ಅದರ ಧನ್ವಂತರಿ ಭಾರತದಿಂದ ಬರಬೇಕು' ಎಂದು ಹೇಳಿ ಪ ತ್ಯ ಲೋಕಕ್ಕೆ ಶ್ರೀ ರಾಮಕೃಷ್ಣಪರಮಹಂಸರು, ಸ್ವಾಮಿ ವಿವೇಕಾ ದರು, ಮಹಾತ್ಮ ಗಾಂಧೀಜಿಯವರ ಪರಿಚಯ ಮಾಡಿಕೊಟ್ಟರು.

ಸ್ವಾಮಿ ವಿವೇಕಾನಂದರು ಸಂಸ್ಕೃತಿಯ ಬಗ್ಗೆ ಭಾರತೀಯರ ಕಲ್ಪನೆಯನ್ನು ಸ್ಪಷ್ಟಪಡಿಸಿದ್ದಾರೆ * ಪಾರಮಾರ್ಥಿಕ ಆವಶ್ಯಕತೆಗೆ ಪ್ರಾಪಂಚಿಕಾ

---

* "A nation may conquer the ways, control the elements ,develop the utilitarian problems of life seemingly to the utmost limits, and yet not realise that in the individual, the highest type of civilisation is found in him who has learned to conquer self This condition is found more in India than in any other country on earth, for there the material conditions are subservient to the spiritual, and the individual looks to the soul manifestations in everything that has life, studying Nature to this end Hence, that gentle disposition to endure with indomitable patience the flings of what appears unkind fortune, the while there is full consciousness of a spiritual strength and knowledge greater than that possessed by any other people.

ವಸ್ಥೆ ಅಡಿಯಾಳಾಗಿರಬೇಕು. ಯಾವದು ಮಾನವನ ಅಂತರ್ಗತ ವಾಗಿರುವ ದೈವಿಕತೆಯನ್ನು ಹೊರಗೆಳೆಯುವುದೋ ಅದೇ ಸಂಸ್ಕೃತಿ. ಸಂಸ್ಕೃತಿ ಜನಜೀವನದ ಪ್ರತಿಯೊಂದು ಚಟುವಟಿಕೆಯಲ್ಲಿಯೂ ಪ್ರಕಟ ವಾಗಬೇಕು.

ಪ್ರಾಪಂಚಿಕ ಭೋಗವನ್ನೇ ಸಂಸ್ಕೃತಿಯೆಂದು ಭಾವಿಸುವ ಒಂದು ವರ್ಗ, ಪಾರಮಾರ್ಥಿಕ ಪ್ರಗತಿಯನ್ನು ಸಂಸ್ಕೃತಿಯೆಂದು ಭಾವಿಸುವ ಒಂದು ವರ್ಗ—ಹೀಗೆ ಎರಡು ವರ್ಗಗಳೇರ್ಪಟ್ಟಿರುವುದನ್ನು ನಾವು ಕಾಣುತ್ತೇವೆ.

ಪ್ರಾಪಂಚಿಕ ಜೀವನದ ಕಡೆಗೆ—ಭೋಗದ ಕಡೆಗೆ ಲಕ್ಷ್ಯಕೊಡ ದಿದ್ದುದರಿಂದಲೇ ಭಾರತೀಯರು ಅನೇಕ ಶತಮಾನಗಳ ದಾಸ್ಯದಲ್ಲಿ ತೊಳಲಬೇಕಾಯಿತೆಂದು ಇತಿಹಾಸ ಸಾರುತ್ತಿದೆ. ಆದರೆ ನಾವು ಭೋಗ ವನ್ನೇ ಬಿಗಿದಪ್ಪಿ, ಪಾಶ್ಚಾತ್ಯರು ತುಳಿದ ತಪ್ಪು ಹಾದಿಯನ್ನೇ ತುಳಿದು ನಮ್ಮ ಪರಂಪರಾಗತ ಹಿರಿಮೆಯನ್ನು ನೀಗಿಕೊಳ್ಳಬೇಕೇ ? ಈ ಸಮಸ್ಯೆಗೆ ಉತ್ತರವನ್ನೂ ಭಾರತವೇ ನೀಡಿದೆ. ಆತ್ಮೋತ್ಕ್ರಾಂತಿಯ ಮಾರ್ಗ ವನ್ನು ತೋರಿಸುತ್ತಾ ಶ್ರೀ ಕೃಷ್ಣ ಅರ್ಜುನನಿಗೆ 'ನೀನು ಕ್ಷತ್ರಿಯ-ನಿನ್ನ ಧರ್ಮವನ್ನು ಪರಿಪಾಲಿಸು' ಎಂದು ಹೇಳಿದ್ದಾನೆ. ಪ್ರಪಂಚದಲ್ಲಿದ್ದೂ ಪ್ರಪಂಚಿಯಾಗದ ಸೂಕ್ಷ್ಮವನ್ನು ಭಾರತ ಕಂಡುಹಿಡಿಯಿತು. ಜಗತ್ತಿನ ಕಲ್ಯಾಣಕ್ಕೆ ಈ ಶೋಧ ಭಾರತದ ವಿಶಿಷ್ಟ ಕಾಣಿಕೆಯೆಂದರೆ ತಪ್ಪಾಗುವು

---

Therefore the exisence of a country and people from which flows an unending stream, that attracts the attention of thinkers far and near to approach and throw from their shoulders an oppressive earthly burden."

*Swami Vivekananda Complete works—Part IV*

"The lower the animal, the more is its enjoyment in the senses, the more it lives in the senses. Civilisation, true civilisation, should mean the power of taking the animal—man out of his sense life—by giving him visions and tastes of planes much higher,—and not external comforts."

***ibid*, Part IV**

ದಿಲ್ಲ. ಬಸವಣ್ಣನವರು ಇದನ್ನೇ 'ಇಲ್ಲಿ ಸಲ್ಲುವವರು ಅಲ್ಲೂ ಸಲ್ಲುವರಯ್ಯಾ' ಎಂದರು. ರತ್ನಾಕರವರ್ಣಿ "ಆಗಮವಧ್ಯಾತ್ಮ ವಳಪಟ್ಟು ಶೃಂಗಾರ, ತ್ಯಾಗ ಭೋಗದ ಮೋಡಿ ಮೆರೆಯೆ" ತನ್ನ ಕಾವ್ಯ ರಚಿಸುವಾಗ ಈ ಕಲ್ಪನೆಯನ್ನೇ ನಮ್ಮ ಕಣ್ಮುಂದೆ ಇಟ್ಟಿದ್ದಾನೆ. ಈ ವಿಷಯವನ್ನು ನಿಜಗುಣ ಶಿವಯೋಗಿಗಳು (೧೪ ನೇ ಶತಮಾನ) ತಮ್ಮ 'ಕೈವಲ್ಯ ಪದ್ಧತಿ' ಯಲ್ಲಿ ಸೊಗಸಾಗಿ ನಿರೂಪಿಸಿದ್ದಾರೆ.

ಜಾಣನು ಲೌಕಿಕ ಪರಮಾರ್ಥವೆರಡನು
ಮಾಣದೆ ಕೂಡಿ ನಡಿಸುತಿಹನಿಂತು ||
ತರುಣಿಯ ಮೊಲೆಯೊಂದನುಣುತಲಣುಗನನ್ಯ
ಕರದೊಳುಳಿದ ಕುಚಾಗ್ರವ ನೋವುವಂತೆ||
ನರಜನ್ಮವಿಡಿದಿಹ ಭೋಗಾನುಭವದೊಳು
ಪರಲೋಕಗತಿಯ ಸಾಧನದೊಳೊಂದಿಹನು ||
ಕೊಳವ ಹೊಕ್ಕಡೆಯೊಡಲಿನ ತಂಪು ಬಿಸಿಲಿನ
ಜಳವನು ಮಿಕ್ಕ ಮೈಯೊಳು ಕಾಣ್ಬನಂತೆ ||
ತಿಳಿವಿನ ಸುಖವನು ವಿಷಯಬಾಧೆಯನು ಸಂ
ಗೊಳಿಸುತೆ ಸಮಯುವೊಂದರೊಳೈದುತಿಹನು ||

ಮಾನವ ತನ್ನ ಆವಶ್ಯಕತೆಗಳನ್ನು ಅತಿ ಸಣ್ಣ ಪ್ರಮಾಣಕ್ಕಿಳಿಸಿ ಕೊಂಡು, ಉನ್ನತ ಆಚಾರ ವಿಚಾರಗಳಲ್ಲಿ ಹೇಗೆ ಲೀನನಾಗಿರಬಹುದೆಂಬು ದನ್ನು ಗಾಂಧೀಜಿ ಆಚರಣೆಗೆ ತಂದು ತೋರಿಸಿ ಕೊಟ್ಟಿದ್ದಾರೆ.

ಟಿ. ಎಸ್, ಇಲಿಯಟ್ಟರು ಇನ್ನೊಂದು ಸ್ವಾರಸ್ಯವಾದ ವಿಷಯ ವನ್ನು ಪ್ರತಿಪಾದನೆ ಮಾಡಿರುತ್ತಾರೆ. ಧರ್ಮವೇ ಎಲ್ಲ ಉನ್ನತ ಪ್ರೇರಣೆ ಗಳ ಮೂಲವೆಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಧರ್ಮಕ್ಕೆ ಅವರು ಕೊಡುವ ವ್ಯಾಖ್ಯೆ ಬಹಳ ವಿಶಾಲವಾದುದೂ, ಉದಾರವಾದುದೂ ಆಗಿದೆ. ಜಗತ್ತಿನ ಪ್ರಾಚೀನ ನಾಗರಿಕತೆಗಳ ಇತಿಹಾಸ ನೋಡುವಾಗ ಧರ್ಮ ಅವುಗಳ ಪ್ರೇರಕಶಕ್ತಿಯಾಗಿದ್ದುದು ಕಂಡುಬರುತ್ತದೆ. ಭಾರತದಲ್ಲಿ ವೇದದ ಋಕ್ಕುಗಳಿಂದ, ಸಾಹಿತ್ಯ, ಕಲೆ, ಜನಜೀವನ ಪ್ರತಿಯೊಂದರ ಮೇಲೂ ಧರ್ಮ ತನ್ನ ಪ್ರಭಾವಮುದ್ರೆಯನ್ನೊತ್ತಿರುವುದು ಕಂಡುಬರು

ಪ್ರಭಾವ ಇಂದಿಗೂ ಅಚ್ಚಳಿಯದಿದೆ ಪರಂಪರಾಗತವಾಗಿರುವ ಈ ರಕ್ತ ಗುಣವನ್ನು ಅನೇಕ ವರ್ಷ ವಿಲಾಯಿತಿಯಲ್ಲಿದ್ದೂ, ಪಾಶ್ಚಾತ್ಯ ಜೀವನದಲ್ಲಿ ಮುಳುಗಿ ತೇಲಿರುವ ಭಾರತೀಯನೂ ನೀಗಿಕೊಳ್ಳಲಾರ. ಅದರ ಹಿಡಿತ ಉಕ್ಕಿನ ಹಿಡಿತ.

ಆದರೆ ಧರ್ಮ ಯಾವಾಗ ಮತಗಳಾಗಿ ಒಡೆದು ಹೋಯಿತೋ ಅದರ ಸಮಗ್ರರೂಪ ಜನಸಾಮಾನ್ಯದಿಂದ ಕಣ್ಮರೆಯಾಗುತ್ತ ಬಂತು. ಹಿಂದ ಗಳಾಗಿದ್ದವರು ಕಾಲಕ್ರಮೇಣ ವೈಶ್ಯರು, ವೀರಶೈವರು, ವೈಷ್ಣವರು, ಜೈನರಾಗುತ್ತಾ ಬಂದರು. ಮತಗಳು ಬೆಳೆದಂತೆ ಮಠಗಳೂ ಬೆಳೆದವು. ಮತ ಮಠಗಳನ್ನು ಅನುಸರಿಸಿಕೊಂಡು ಆಚಾರ, ವಿಚಾರ, ಸಂಪ್ರದಾಯಗಳು ಬೆಳೆದವು. ಜನ ಈ ಶಾಖೋಪಶಾಖೆಗಳ ಆಚಾರ ವಿಚಾರಗಳನ್ನು ನಂಬಿ ಮೂಲಭೂತವಾದ ತತ್ತ್ವವನ್ನು ಮರೆಯುತ್ತ ಬಂದರು. 'ಧರ್ಮ ಜನತೆಯ ಅಫೀಮಾಗಿದೆ' ಎಂದು ಲೆನಿನ್ ಹೇಳಿದ ಮಾತನ್ನೇ ಭಾರತೀಯ ತರುಣರೂ ಪ್ರತಿಧ್ವನಿಸಲು ಸಾಕಷ್ಟು ಪ್ರಬಲಕಾರಣಗಳಿವೆ. ಆ ಕೂಗು ಭಾರತದಲ್ಲಿ ಏಳುವುದಕ್ಕೆ ಮತಗಳ ಪ್ರಾಬಲ್ಯ, ಹೋರಾಟಗಳೇ ಮೂಲ ಕಾರಣ. ಭಿನ್ನಭಿನ್ನವಾಗಿರುವ ಸಮಾಜಗಳನ್ನು ಒಗ್ಗೂಡಿಸಿ, ಜನತೆಯಲ್ಲಿ ಸೌಹಾರ್ದ, ಪ್ರೇಮಗಳನ್ನು ಬೆಳೆಸುವ ಶಕ್ತಿ ಮತಗಳಲ್ಲಿಲ್ಲ.

ಆದರೆ ಸಾಹಿತ್ಯ, ಕಲೆಗಳು ಈ ಸಂಕುಚಿತ ವ್ಯೂಹದೊಳಗೆ ಸಿಕ್ಕಿಲ್ಲ. ಜಾತಿ, ಮತ, ಪಂಥ, ಕೋಮು, ಭಾಷೆ, ಪ್ರಾಂತ್ಯಗಳ ಇತಿಮಿತಿಗಳಿಂದ ಸಾಹಿತ್ಯ, ಕಲೆಗಳು ಕಲುಷಿತವಾಗಿಲ್ಲ. ಪರಂಪರಾಗತವಾಗಿ ಬಂದ ಅಧ್ಯಾತ್ಮಿಕ ಶಕ್ತಿಯನ್ನು ಆವಿರ್ಭವಿಸಿಕೊಂಡು ಸಾಹಿತ್ಯ, ಕಲೆಗಳು ಪ್ರಾಯಶಃ ವಿಶ್ವಬಂಧುತ್ವವನ್ನು ಸಾಧಿಸುವ ಗುರುತರ ಜವಾಬ್ದಾರಿಯನ್ನು ಇನ್ನು ಇನ್ನುಮುಂದೆ ಹೊತ್ತುಕೊಳ್ಳಬೇಕಾಗಿದೆ. ಧರ್ಮದಿಂದಲೇ ಸ್ಫೂರ್ತಿಗೊಂಡು ನಮ್ಮಲ್ಲಿ ವಿಶ್ವವಿಖ್ಯಾತವಾದ ಸಾಹಿತ್ಯ, ಕಲೆ ಬೆಳೆದಿರು ಸತ್ಯವಾದರೂ ಧರ್ಮದ ಗೊಡವೆಗೇ ಕೈಹಾಕದೆ ಅವುಗಳನ್ನು ಬೆಳಸುವುದೂ ಸಾಧ್ಯ. ಧರ್ಮಕ್ಕೆ ಸಮರಸ ಮೂಡಿಸುವ ಮಹಾಶಕ್ತಿ ಎಂಬ ವ್ಯಾಖ್ಯೆ ಕೊಡುವುದಾದರೆ ನಮಗೆ ಅದರ ನೆರವು ಬೇಕು: ಅದು ವಿರಸ ಮೂಡಿಸುವ ರಾಕ್ಷಸೀಶಕ್ತಿಯಾದಲ್ಲಿ ಅದರ ಸಂಪರ್ಕ ಬೇಡ.

ಕನ್ನಡ ನಾಡಿಗೆ ಅನ್ವಯಿಸಿ ನಾವು 'ಸಂಸ್ಕೃತಿ' ಶಬ್ದವನ್ನು ಬಳಸುತ್ತ ಬಂದಿದ್ದೇವೆ. ವಿಶಾಲ ಭಾರತದಿಂದ ಭಿನ್ನವಾದ—ಪ್ರತ್ಯೇಕ ಸಂಸ್ಕೃತಿ ಕರ್ನಾಟಕದಲ್ಲಿತ್ತೇ ?—ಇದ್ದರೆ ಅದರ ಸ್ವರೂಪವೇನು ಎಂದು ನಾವು ವಿವೇಚಿಸಬೇಕು.

ಕನ್ನಡ ನಾಡು ಪ್ರಾಚೀನವಾದುದೆಂಬುದು ನಿರ್ವಿವಾದ. ರೆವರೆಂಡ್ ಫಾದರ್ ಹೆರಾಸ್‌ರವರು ಮಹೇಂಜೊದೊರೋ ಸಂಶೋಧನೆಗಳ ಬಗ್ಗೆ ಮಾಡಿರುವ ಊಹಾಪೋಹಗಳು ನಿಂತರೆ ಕನ್ನಡ ನಾಡಿನ ಚರಿತ್ರೆ ಕ್ರಿ. ಪೂ. ೩೦೦೦ಕ್ಕೆ ಮತ್ತು ಅದಕ್ಕೂ ಪೂರ್ವಕ್ಕೆ ಹೋಗುತ್ತದೆ. ರಾಮಾಯಣದಲ್ಲಿ ಕರ್ನಾಟಕದ ಹೆಸರಿನ ನಿರ್ದಿಷ್ಟ ಉಲ್ಲೇಖವಿರದಿದ್ದರೂ ಅದರ ಕೆಲಭಾಗ ಕರ್ನಾಟಕದಲ್ಲಿಯೇ ನಡೆದಂತೆ ತಿಳಿದುಬರುತ್ತದೆ. ಮಹಾಭಾರತದ ಸಂಭವ ಪರ್ವ, ಭೀಷ್ಮ ಪರ್ವಗಳಲ್ಲಿ ಕರ್ನಾಟಕದ ಉಲ್ಲೇಖವಿದೆ. ಕ್ರಿಸ್ತ ಶಕ ಒಂದು ಎರಡನೆಯ ಶತಮಾನದವರಾದ ಪ್ಲೀನಿ, ಟಾಲೆಮಿಗಳು ಕರ್ನಾಟಕವನ್ನು ಹೆಸರಿಸುತ್ತಾರೆ. ಕ್ರಿಸ್ತಶಕ ಮೂರನೆಯ ಶತಮಾನಕ್ಕೆ ಸೇರಿದ ಗ್ರೀಕ್ ಪ್ರಹಸನದಲ್ಲಿ ಹೇರಳವಾಗಿ ಕನ್ನಡ ಶಬ್ದಗಳು ದೊರೆಯುವವೆಂದು ಡಾ|| ಹುಲ್ಷ್‌ರವರು ಅಭಿಪ್ರಾಯ ಪಡುತ್ತಾರೆ. ಚಿತ್ರದುರ್ಗದ ಬಳಿಯಿರುವ ಚಂದ್ರವಳ್ಳಿಯಲ್ಲಿ ನಡೆದಿರುವ ಭೂಗರ್ಭ ಶೋಧನೆಯಿಂದ ಕ್ರಿಸ್ತಪೂರ್ವದಲ್ಲಿಯೇ ಕರ್ನಾಟಕದಲ್ಲಿ ಒಂದು ವಿಶಾಲ ಸಾಮ್ರಾಜ್ಯವಿದ್ದು ಅದು ಇಟಲಿ, ಚೀಣ ದೇಶಗಳೊಡನೆ ವ್ಯಾಪಾರ ನಡೆಸಿದುದಾಗಿ ತಿಳಿಯುಬರುತ್ತದೆ. ಛಾಂದೋಗ್ಯೋಪನಿಷತ್ತಿನಲ್ಲಿ ದೊರೆಯುವ ಕೆಲವು ಶಬ್ದಗಳ ಮೂಲ ಕನ್ನಡವೆಂದು ಡಾ|| ಜಾಕಬಿ ಮತ್ತು ಡಾ|| ಭಂಡಾರ್ಕರ್ ಅಭಿಪ್ರಾಯಪಡುತ್ತಾರೆ. ಶೂದ್ರಕ ಮಹಾಕವಿಯ 'ಮೃಚ್ಛಕಟಿಕ' (ಕಾಲ ನಾಲ್ಕು ಅಥವಾ ಐದನೆಯ ಶತಮಾನ) ನಾಟಕದಲ್ಲಿ ಕರ್ನಾಟಕದ ಉಲ್ಲೇಖವಿದೆ. ಕ್ರಿಸ್ತ ಶಕ ಮೂರನೆಯ ಶತಮಾನದಲ್ಲಿ ಕದಂಬರು ಕರ್ನಾಟಕದಲ್ಲಿ ದೊಡ್ಡ ಸಾಮ್ರಾಜ್ಯವನ್ನು ಕಟ್ಟಿದರು. ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಲ್ಲಿ ಚಂದ್ರಗುಪ್ತ ತನ್ನ ಗುರು ಶ್ರುತಕೇವಲಿ ಭದ್ರಬಾಹುವಿನೊಂದಿಗೆ ಶ್ರವಣಬೆಳಗೊಳಕ್ಕೆ ಬಂದು ನಿಂತಂತೆ ತಿಳಿಯುಬರುತ್ತದೆ. ಅಶೋಕನ ಕೆಲವು ಶಾಸನಗಳು ಕನ್ನಡ ನಾಡಿನಲ್ಲಿ

ದೊರೆಯುತ್ತವೆ. ಕನ್ನಡ ಭಾಷೆಯಲ್ಲಿ ಐದನೆಯ ಶತಮಾನದಲ್ಲಿ ಹಲ್ಮಿಡಿಯ ಶಾಸನ ಬರೆಯಲ್ಪಟ್ಟಿತ್ತು. ಕ್ರಿಸ್ತಶಕ ಒಂಭತ್ತನೆಯ ಶತಮಾನಕ್ಕೆ ಸೇರಿದ ನೃಪತುಂಗನ ಕವಿರಾಜಮಾರ್ಗದಲ್ಲಿ ಅದಕ್ಕೂ ಪೂರ್ವದಲ್ಲಿದ್ದ ಕನ್ನಡ ಕವಿಗಳ ಹೆಸರುಗಳು ಉಲ್ಲೇಖಿಸಲ್ಪಟ್ಟಿದೆ. ಕನ್ನಡದ ಮೊದಲನೆಯ ಗದ್ಯ ಗ್ರಂಥ 'ವೊಡ್ಡಾರಾಧನೆ' ಮೂರನೆಯ ಶತಮಾನಕ್ಕೆ ಸೇರಿದ್ದು. ಹತ್ತನೆಯ ಶತಮಾನದಲ್ಲಿ ಚಾವುಂಡರಾಯನಿಂದ 'ಚಾವುಂಡರಾಯ ಪುರಾಣ' ಬರೆಯಲ್ಪಟ್ಟಿತು.

ಇಷ್ಟು ಪ್ರಾಚೀನವೂ ಇತಿಹಾಸಪೂರ್ಣವೂ ಆದ ನಾಡು ಭಾರತ ಸಂಸ್ಕೃತಿ ರೂಪಗೊಳ್ಳಲು ನೆರವಾಗಿರಬೇಕೆಂಬುದು ಸ್ವತಃಸ್ಸಿದ್ಧ ವಾಗುತ್ತದೆ.

ಬೌದ್ಧ ಜೈನ ಧರ್ಮಗಳು ಕರ್ನಾಟಕದಲ್ಲಿ ವರ್ಧಿಸಿದವು. ತ್ರಿಮತಾಚಾರ್ಯರಲ್ಲಿ ಒಬ್ಬರಾದ ಶ್ರೀ ಮಾಧ್ವರು ಕನ್ನಡಿಗರು. ಉಳಿದಿಬ್ಬರೂ ಕರ್ನಾಟಕವನ್ನೇ ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡರು. ವೀರಶೈವ ಪಂಚಾಚಾರ್ಯರಿಗೂ, ಬಸವ ಪಂಥಿಗಳಿಗೂ ಕರ್ನಾಟಕವೇ ನೆಲೆವೀಡಾಯಿತು. ಧರ್ಮದ ವಿಷಯದಲ್ಲಿ ಅಭೂತಪೂರ್ವ ಸಹನೆ ಸೌಹಾರ್ದ ಕರ್ನಾಟಕದಲ್ಲಿ ಕಂಡುಬಂದಿವೆ. ಬೇರೆಬೇರೆ ಮತಾವಲಂಬಿಗಳಾಗಿದ್ದ ಕವಿಗಳೂ ವಿಶ್ವಧರ್ಮವನ್ನೇ ಪ್ರಸಾರ ಮಾಡಿದ್ದಾರೆ.

ಹೊಯ್ಸಳರ ಕಾಲದ ಬೇಲೂರಿನ ಒಂದು ಶಿಲಾಲೇಖನದಲ್ಲಿ ಈ ಶ್ಲೋಕ ಸಿಕ್ಕುತ್ತದೆ.

"ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ
ವೇದಾಂತಿನೋ |
ಬೌದ್ಧಾಃ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ
ನೈಯಾಯಿಕಾಃ ||
ಅರ್ಹಚ್ಚೇತಿ ಹ ಜೈನಶಾಸನ ಪರಾಃ ಕರ್ಮೇತಿ
ಮೀಮಾಂಸಕಾಃ |
ಸೋ ಯಂ ವೋ ವಿದಧಾತು ವಾಂಛಿತಫಲಂ ಶ್ರೀ ಕೇಶವ
ಸ್ಸರ್ವದಾ ||

ಮಹಾಕವಿಗಳ ವಾಣಿಯೂ ಅದೇ ಆಗಿದೆ

**ಶ್ರೀ ಬಸವಣ್ಣನವರು** (೧೨ನೆಯ ಶತಮಾನ)

" ದೇವನೊಬ್ಬ ನಾವು ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ "

**ಅಲ್ಲಮ ಪ್ರಭುದೇವರು** (೧೨ನೆಯ ಶತಮಾನ)

" ನಿಮ್ಮಲ್ಲಿ ನೀವು ತಿಳಿದು ನೋಡಿದರೆ ಅನ್ಯವಿಲ್ಲ ಕಾಣಿರಣ್ಣಾ.
ಅರಿವು ನಿಮ್ಮಲ್ಲಿಯೇ ತದ್ಗತವಾಗಿದೆ.
ಅನ್ಯಭಾವವ ನೆನೆಯದೆ ತನ್ನೊಳಗೆ ತಾನೆ
ಎಚ್ಚರವಿರಬಲ್ಲರೆ ತನ್ನಲ್ಲಿಯೇ ತನ್ಮಯ ಗುಹೇಶ್ವರ ಲಿಂಗವು."

**ರತ್ನಾಕರವರ್ಣಿ** (೧೬ ನೆಯ ಶತಮಾನ)

" ತ್ರಿಜಗತ್ಸ್ವಾಮಿ ಜಿನೇಂದ್ರ ಸಿದ್ಧ ಶಿವಲೋಕಾರಾಧ್ಯ
ಸರ್ವಜ್ಞ ಶಂ—
ಭು ಜಗನ್ನಾಥ ಜಗತ್ಪಿತಾಮಹ ಹರ ಶ್ರೀಕಾಂತ ವಾಣೀಶ ವಿ-
ಷ್ಣು ಜಿತಾನಂಗ ಜಿನೇಶ ಪಶ್ಚಿಮ ಸಮುದ್ರಾಧೀಶ್ವರಾ ಬೇಗದಿಂ
ನಿಜಮಂ ತೋರು ದಯಾಳುವೇ ತಳುವಿದೇಂ ರತ್ನಾಕರಾ
ಧೀಶ್ವರಾ ||

**ಮುಪ್ಪಿನ ಷಡಕ್ಷರಿ** (೧೬ ನೆಯ ಶತಮಾನ)

" ಸಕಲಕೆಲ್ಲಕೆ ನೀನೆ
ಅಕಳಂಕ ಗುರುವೆಂದು
ನಿಖಿಳ ಶಾಸ್ತ್ರವು ಪೇಳುತಿರಲರಿದೆಸು ||ಪ||

ಅವರವರ ದರುಶನಕೆ
ಅವರವರ ವೇಷದಲಿ
ಅವರವರಿಗೆಲ್ಲ ಗುರು ನೀನೊಬ್ಬನೆ ||

ಅವರವರ ಭಾವಕ್ಕೆ
ಅವರವರ ಪೂಜೆಗಂ
ಅವರವರಿಗೆಲ್ಲ ದೇವ ನೀನೊಬ್ಬನೆ ||

ಹೋರಾಟವಿಕ್ಕಿಸಲು
ಬೇರಾದೆಯಲ್ಲದೆ
ಬೇರುಂಟೆ ಜಗದೊಳಗೆ ಎಲೆದೇವನೆ ||

ಆರು ಅರಿಯರು ನೀನು
ಬೇರಾದ ಪರಿಗಳನು
ಮಾರಾರಿ ಶಿವ ಷಡಕ್ಷರ ಲಿಂಗವೆ ||

**ಸರ್ವಜ್ಞ** (೧೬ ನೆಯ ಶತಮಾನ)

"ತನ್ನ ತಾನರಿದಂಗೆ ಭಿನ್ನಭಾವನೆಯಿಲ್ಲ
ತನ್ನವರಿಲ್ಲ ತ್ರೈಭುವನ
ತನ್ನೊಳಗಿಹುದು ಸರ್ವಜ್ಞ ||
ಆದೇವ ಈದೇವ ಮಾದೇವನೆನಬೇಡ
ಆದೇವರದೇವ ಭುವನಪ್ರಾಣಿಗಳಿ
ಗಾದವನೆ ದೇವ ಸರ್ವಜ್ಞ ||

ಇತ್ತೀಚಿನವರಾದ ಶಿಶುನಾಳ ಶರೀಫ ಸಾಹೇಬರು, ರಾಮ, ಕೃಷ್ಣ, ಕಾಳಿ, ಅಲ್ಲಾ ಒಂದೇ ಎಂದು ಹಾಡಿದರು; ಪಂಡಿತ ತಾರಾನಾಥರು 'ಕುರಾನ ಇಂಜೀಲ್ ತೇರಾ, ಪುರಾನ ಬೇದ ತೇರಾ' ಎಂದು ಹಾಡಿದರು.

ಧರ್ಮದ ಹೆಸರಿನಲ್ಲಿ ಕರ್ನಾಟಕದಲ್ಲಿ ರಕ್ತಪಾತವಾಗಿಲ್ಲ. ಒಂದೇ ಕುಟುಂಬದ ಜನ ಬೇರೆಬೇರೆ ಧರ್ಮಗಳಿಗೆ ಸೇರಿದ್ದ ನಿದರ್ಶನಗಳೂ ದೊರೆಯುತ್ತವೆ. ಮುಸಲ್ಮಾನರು ಹಿಂದೂ ದೇವದೇವತೆಗಳಿಗೆ ನಡೆದು ಕೊಳ್ಳುವುದು, ಹಿಂದುಗಳು ಮುಸಲ್ಮಾನ ಪೀರರ ದರ್ಗಾಗಳಿಗೆ ನಡೆದು ಕೊಳ್ಳುವುದೂ ಇಂದಿನವರೆಗೆ ನಡೆದುಬಂದಿದೆ.

ಧರ್ಮಸಹಿಷ್ಣುತೆ, ಧಾರ್ಮಿಕ ಸಮಭಾವನೆಯಲ್ಲಿ ಕರ್ನಾಟಕ ಬಹಳ ಮುಂದಾಗಿದೆ. ಆರ್ಥಿಕ ಸಮಸ್ಯೆ, ರಾಜಕಾರಣ ತಲೆಹಾಕಿ ಧರ್ಮವನ್ನು ದುರುಪಯೋಗಪಡಿಸಿಕೊಂಡ ಕಾಲದಲ್ಲಿ ಮಾತ್ರ ಘರ್ಷಣೆ ಗಳಾಗಿವೆ.

ಶಿಲ್ಪ, ವಾಸ್ತುಶಿಲ್ಪ, ನಾಟಕ, ನಾಟ್ಯ, ಸಂಗೀತ, ಸಾಹಿತ್ಯಗಳಲ್ಲಿಯೂ ಕರ್ನಾಟಕದ ಪರಂಪರೆ ದೊಡ್ಡದು. ಅಖಿಲ ಭಾರತದಲ್ಲಿ ತನ್ನ ಹಿಂದೂತ್ವವನ್ನು ಕಾಯ್ದುಕೊಂಡಿರುವುದು ಕರ್ನಾಟಕದ ಹೊಯ್ಸಳ, ಚಾಲುಕ್ಯ ಸಂಪ್ರದಾಯದ ಶಿಲ್ಪಕಲೆ ಕರ್ನಾಟಕ ಸಂಗೀತ, ನಾಟಕ, ನಾಟ್ಯಗಳ ಮೇಲೆ ಇಸ್ಲಾಮಿನ ಅಥವಾ ಐರೋಪ್ಯ ಪ್ರಭಾವ ಬಿದ್ದಿಲ್ಲ. ಲಲಿತಕಲೆಗಳಲ್ಲಿ ಭಾರತದ ವೈಶಿಷ್ಟ್ಯವನ್ನು ನಾವು ಇಂದಿಗೂ ಕರ್ನಾಟಕದ ಲಲಿತ ಕಲೆಗಳಲ್ಲಿಯೇ ಕಾಣಬೇಕಾಗಿದೆ

\ ಕನ್ನಡ ಸಾಹಿತ್ಯವನ್ನು ವಿಶೇಷವಾಗಿ ಬೆಳಿಯಿಸಿ ಅದಕ್ಕೆ ಭದ್ರವಾದ ಬುನಾದಿ ಹಾಕಿದವರು ಜೈನರು. ತರುವಾಯ ವೀರಶೈವ, ಬ್ರಾಹ್ಮಣ ಕವಿಗಳು ಅದಕ್ಕೆ ನಾನಾಮುಖತೆಯನ್ನು ಕಲ್ಪಿಸಿದರು. ಕನ್ನಡ ಸಾಹಿತ್ಯಕೆ ಮುಸಲ್ಮಾನರು, ಕ್ರೈಸ್ತರು, ತಮ್ಮ ಸೇವೆಯನ್ನರ್ಪಿಸಿದ್ದಾರೆ. ಕಂತಿಯಿಂದ ಹೇವನಕಟ್ಟಿ ಗಿರಿಯಮ್ಮನವರೆಗೆ ಅನೇಕ ಸ್ತ್ರೀಯರು ಗಮನಾರ್ಹವಾದ ಕೃತಿಗಳನ್ನು ರಚಿಸಿದ್ದಾರೆ. ಮಹಾದೇವಿಯಕ್ಕನ ವಚನಗಳು ಜಗತ್ತಿನ ಸಾಹಿತ್ಯದಲ್ಲಿ ಸ್ಥಾನದಲ್ಲಿ ಸ್ಥಾನಪಡೆಯಲರ್ಹವಾಗಿವೆ.)

ಒಂದು ಕಡೆ ವೀರಶೈವರು, ಒಂದು ಕಡೆ ವೈಷ್ಣವರು, ಸಾಹಿತ್ಯವನ್ನು ರಾಜರ, ಪಂಡಿತರ ಹಿಡಿತದಿಂದ ಬಿಡಿಸಿ ಅದನ್ನು ಸಾಮಾನ್ಯರ ಬಳಿಗೊಯ್ದರು. ವೇದ, ವೇದಾಂತಗಳ ತತ್ತ್ವಗಳು ಜನಸಾಮಾನ್ಯದಲ್ಲಿ ಅವರ ಮಾತೃಭಾಷೆಯಲ್ಲಿಯೇ ಪ್ರಸಾರಗೊಂಡವು.

ಅನಕ್ಷರಜ್ಞರಾದ ಹಳ್ಳಿಯುವರ ಬಾಯಲ್ಲಿ ಬರುವ ತತ್ತ್ವಗಳೂ, ಅವರ ಜೀವನದಲ್ಲಿ ಮೂಡಿರುವ ಅಧ್ಯಾತ್ಮ ಸಂಪತ್ತೂ ಭಾರತೀಯ ಅಧ್ಯಾತ್ಮ ಜ್ಞಾನದ ಅಮರತ್ವವನ್ನು ಸಾರುತ್ತಿದೆ. ಭಾರತದಲ್ಲಿ ಅದರಲ್ಲಿಯೂ ಕರ್ಣಾಟಕದಲ್ಲಿ ಅಧ್ಯಾತ್ಮಜ್ಞಾನ 'ಪುಸ್ತಕದ ಬದನೇಕಾಯಿ' ಯಾಗಲಿಲ್ಲ. ಅದರ ಜೀವಾಳ ಜನಜೀವನದಲ್ಲಿ ಸಮರಸವಾಗಿ ಬೆರೆಯಿತು.

ಜನಜೀವನದಲ್ಲಿ ಅವಿರಳವಾಗಿ ಬೆರೆತಿರುವ ಅಧ್ಯಾತ್ಮಜ್ಞಾನ ಒಂದು ಮಹತ್ತ್ವದ ಸಿದ್ಧಾಂತವನ್ನು ಸ್ಥಾಪಿಸುತ್ತದೆ. ಗ್ರೀಕ್, ಈಜಿಪ್ಟ್, ರೋಮ್, ಅಸ್ಸಿರಿಯಾ, ಬ್ಯಾಬಿಲೋನಿಯಾ ದೇಶಗಳಲ್ಲಿಯೂ ಅತ್ಯಂತ ಪುರಾತನವಾದ ಸಂಸ್ಕೃತಿ ಬೆಳೆಯಿತು. ಒಂದು ಕಾಲಕ್ಕೆ ಗ್ರೀಸ್

ಇಂಡಿಯ ಜಗತ್ತಿನ ಸಾಂಸ್ಕೃತಿಕ ಸಾರ್ವಭೌಮತ್ವವನ್ನು ಅನುಭವಿಸಿತು. ಆದರೆ ಈ ದೇಶಗಳ ಪ್ರಾಚೀನ—ಅರ್ವಾಚೀನ ಸಂಸ್ಕೃತಿಗಳನ್ನು ತುಲನೆ ಮಾಡಿನೋಡಿದರೆ ಪರಸ್ಪರ ಸಂಬಂಧ ಕಂಡುಬರುವುದಿಲ್ಲ. ಐರೋಪ್ಯ ನಾಗರಿಕತೆಯೆನಿಸಿಕೊಂಡಿರುವ 'ಯಂತ್ರ ಸಂಸ್ಕೃತಿ' ಅವರೆಲ್ಲರ ಮೇಲೆ ಏಕಪ್ರಕಾರವಾದ ಪ್ರಭಾವ ಬೀರಿ ಅವರ ವೈಶಿಷ್ಟ್ಯಗಳನ್ನಳಿಸಿ ಹಾಕಿರುವುದನ್ನು ನಾವು ನೋಡಬಹುದು ಇಂದಿಗೂ ಭಾರತವೊಂದೇ ತನ್ನ ಸಂಸ್ಕೃತಿಯನ್ನು ಕಾಯ್ದುಕೊಂಡು ಬಂದಿರುವುದು. ಭಾರತದಲ್ಲಿ ಸಂಸ್ಕೃತಿ ಒಂದು ಪ್ರಾಚೀನ ಅವಶೇಷವಲ್ಲ, ಜೀವಂತ ವಿಶೇಷ.

ಈಯೆಲ್ಲ ವಿಚಾರಗಳನ್ನು ವಿವೇಚಿಸುವಾಗ ನಮ್ಮ ಮುಂದೆ ಬಂದು ನಿಲ್ಲುವ ಪ್ರಶ್ನೆ—ಕರ್ನಾಟಕಕ್ಕೆ ಪ್ರತ್ಯೇಕ ಸಂಸ್ಕೃತಿಯಿದೆಯೇ? ಇದ್ದರೆ ಅದರ ಸ್ವರೂಪವೆಂಥದು ?

ಒಂದು ದೃಷ್ಟಾಂತದ ಸಹಾಯ ತೆಗೆದುಕೊಂಡು ಈ ಸಮಸ್ಯೆಯನ್ನು ಬಿಡಿಸಲೆತ್ನಿಸೋಣ. ಬಂಗಾಳ, ಇಳಕಲ್ಲು, ಬಿಹಾರ, ಮೈಸೂರುಗಳು ಸೀರೆಗಳಿಗೆ ಪ್ರಸಿದ್ಧಿಯಾಗಿವೆ. ಅವುಗಳನ್ನು ನಾವು ಬಂಗಾಳ ಸೀರೆ—ಮೈಸೂರು ಸೀರೆ ಎಂದು ಕರೆಯುತ್ತೇವೆ. ಆದರೆ ಅವುಗಳಿಗೆಲ್ಲಾ ಚೀಣದಿಂದ ರೇಶ್ಮೇ ಬರುತ್ತಿತ್ತು. ಚೀಣಾ ರೇಶ್ಮೆಯನ್ನು ಉಪಯೋಗಿಸಿದ ಮೇಲೆ ಅವೆಲ್ಲಾ 'ಚೀಣಾ ಸೀರೆ' ಗಳಾಗಬೇಕಾಗಿತ್ತು. ಚೀಣಾ ರೇಷ್ಮೆಯನ್ನುಪಯೋಗಿಸಿದರೂ ಬಂಗಾಳ, ಮೈಸೂರು, ಬಿಹಾರ, ಇಳಕಲ್ಲು ತಮ್ಮ ತಮ್ಮ ಅಭಿರುಚಿಗಳಿಗುಣವಾದ ಬಣ್ಣ ಹಾಕಿ, ಅಂಚು ಸೆರೆಗಿಗೆ ಬಗೆ ಬಗೆಯ ಮಾದರಿಗಳನ್ನು ಜೋಡಿಸಿದವು. ಅವುಗಳು ವಿಶಿಷ್ಟ ಸ್ವರೂಪವನ್ನು ಪಡೆದವು. ಆದರೆ ಭಿನ್ನಭಿನ್ನವಾಗಿ ಕಂಡುಬರುವ ಈ ವೈಶಿಷ್ಟ್ಯದ ಹಿಂದೆ ಚೀಣಾ ರೇಷ್ಮೆ ಇದೆಯೆನ್ನುವುದನ್ನು ನಾವು ಮರೆಯಲು ಸಾಧ್ಯವಿಲ್ಲ. 'ಅನೇಕದಲ್ಲಿ ಏಕ' (Unity in diversity) ಕಂಡು ಬರುತ್ತದೆ. ಕರ್ನಾಟಕ, ತಮಿಳುನಾಡು, ಕೇರಳ, ಮಹಾರಾಷ್ಟ್ರ, ಬಂಗಾಳ ಭಾರತದ ಭದ್ರವಾದ ಬುನಾದಿಯ ಮೇಲೆ ತಮ್ಮ ಕಳಸ ಕಟ್ಟಡಗಳನ್ನು ಕಟ್ಟಿದವು. ಅವುಗಳು ಹೊರಗಣ್ಣಿಗೆ ಭಿನ್ನಭಿನ್ನವಾಗಿ ಕಂಡುಬರುತ್ತಿದ್ದರೂ ಒಳಗಣ್ಣಿಗೆ ಒಂದೇ ಎಂದು ಕಾಣಬರದಿರದು. ವೇಮನ, ಸರ್ವಜ್ಞ,

ಕಬೀರ್, ತಿರುವಳ್ಳುವರ್, ಶಿಶುನಾಳ ಶರೀಫ ಸಾಹೇಬ, ತುಕಾರಾಮ ಇವರ ವಚನಗಳಲ್ಲಿ ಏಕಪ್ರಕಾರವಾದ ಸಾಧನೆ, ಸಿದ್ಧಿಗಳು ಕಂಡು ಬರುತ್ತವೆ. ಶಂಕರ, ಅಲ್ಲಮಪ್ರಭು, ಸ್ವಾಮಿ ವಿವೇಕಾನಂದ ಇವರ ಉಪದೇಶಗಳಲ್ಲಿ ಏಕಪ್ರಕಾರವಾದ ಆತ್ಮವಿಕಾಸ ಕಂಡು ಬರುತ್ತದೆ. ನಾಗರಿ, ಚೋಳ, ಪಲ್ಲವ, ಹೊಯ್ಸಳ, ಚಾಳುಕ್ಯ ಸಂಪ್ರದಾಯಗಳು ಒಂದೇ ತತ್ವವನ್ನು ನಾನಾ ರೂಪದಲ್ಲಿ ಚಿತ್ರಿಸುತ್ತವೆ. ಉತ್ತರದ ಗಂಗೆ, ಯಮುನೆ, ದಕ್ಷಿಣದ ಕಾವೇರಿ, ಗೋದಾವರಿ ಎಲ್ಲ ಹಿಂದುಗಳಿಗೂ ಪವಿತ್ರ ತೀರ್ಥಗಳಾಗಿವೆ. ದಕ್ಷಿಣದ ತಿರುಪತಿಗೆ ಉತ್ತರದಿಂದ ಲಕ್ಷಾಂತರ ಮಂದಿ ಭಕ್ತರು ಬರುತ್ತಾರೆ; ಉತ್ತರದ ಕಾಶಿಗೆ ದಕ್ಷಿಣದಿಂದ ಲಕ್ಷಾಂತರ ಮಂದಿ ಭಕ್ತರು ಹೋಗುತ್ತಾರೆ. ಭಾರತದ ಹಲವು ಭಾಷೆಗಳ ಹಲವು ಪ್ರಾಂತ್ಯಗಳ ಜನತೆಯನ್ನು ಭಾರತ ಸಂಸ್ಕೃತಿ, ಹಲವು ಹೂಗಳನ್ನು ಕಟ್ಟುವ ತಂತುವಿನಂತೆ ಹಿಡಿದಿದೆ.

ಭಾರತದ ಇತರ ಪ್ರಾಂತ್ಯಗಳಿಗೂ ಪರಂಪರಾಗತವಾದ ಸಾಂಸ್ಕೃತಿಕ ಇತಿಹಾಸವಿದೆ. ಬೇರೆ ಬೇರೆ ಪ್ರಾಂತ್ಯಗಳು ಸಲ್ಲಿಸಿದ ಸೇವೆಯ ಸಾರ ಸರ್ವಸ್ವವೇ 'ಭಾರತ ಸಂಸ್ಕೃತಿ.' ಪ್ರಾಂತ್ಯಗಳ ಸಂಸ್ಕೃತಿಗಳು ಎಷ್ಟೇ ಪ್ರಾಚೀನವಾದರೂ, ದೊಡ್ಡದಾದರೂ ಭಾರತವೆಂಬ ತಾಯಿಯ ಮಕ್ಕಳೆಂಬುದನ್ನು ಮರೆಯಬಾರದು. ಸಂಸ್ಕೃತಿಯ ಹೆಸರಿನಲ್ಲಿ ಪ್ರಾಂತ್ಯಗಳು ಪರಸ್ಪರ ಹೋರಾಡುವುದಕ್ಕಿಂತ ತಮ್ಮ ಮಧುರ ಬಾಂಧವ್ಯವನ್ನು ಸ್ಮರಣೆಗೆ ತಂದುಕೊಂಡು ಪರಸ್ಪರ ಸ್ನೇಹ, ಸೌಹಾರ್ದದಿಂದ ಬಾಳುವುದು ಅಖಿಲ ಭಾರತದ ದೃಷ್ಟಿಯಿಂದ ಅವಶ್ಯಕ. ಭಾರತದ ಹಿರಿಮೆಗೇ ಊನಬಾರದಂತೆ, ಅದರ ಭದ್ರತೆಗೆ ಭಂಗಬಾರದಂತೆ ಪ್ರಾಂತ್ಯಗಳೂ ಅವುಗಳ ಸಂಸ್ಕೃತಿಯೂ ಬೆಳೆಯಬೇಕು.

ಭಾರತ ಸಂಸ್ಕೃತಿಯ ಹಿರಿಮೆಯನ್ನು ಹೀಗೆ ಕ್ರೋಢೀಕರಿಸಬಹುದು:

೧) ಭಾರತ ಹೇಗೆ ಕ್ರಿಯಾಶಕ್ತಿಯ ತೌರೂರೋ ಹಾಗೇ ಸಮಿಾಕರಣಕ್ಕೂ ಹೆಸರಾಗಿದೆ. ಹೊರಗಿನಿಂದ ಬಂದ ವಿಚಾರಧಾರೆಯನ್ನು ಅದು ಸ್ವಾಗತಿಸಿದೆ. ಆದರೆ ಹೊರಗಿನ ವಿಚಾರಧಾರೆಗೆ ಮಾರುಹೋಗಿ

ತನ್ನ ವ್ಯಕ್ತಿತ್ವವನ್ನು ನಾಶಮಾಡಿಕೊಂಡಿಲ್ಲ. ಹೊರಗಿನದನ್ನು ತನ್ನ ದನ್ನಾಗಿ ಮಾಡಿಕೊಳ್ಳುವ ಒಂದಪೂರ್ವ ಶಕ್ತಿ ಅದರಲ್ಲಿ ಹುದುಗಿದೆ.

೨) ಆಧ್ಯಾತ್ಮಿಕ ಸಾಧನೆಯ ಬಗ್ಗೆ ಭಾರತ ಅಭೂತಪೂರ್ವ ಆಸಕ್ತಿ ತೋರಿದೆ. ಅದರ ಎಲ್ಲ ಚಟುವಟಿಕೆಗಳೂ ಅಧ್ಯಾತ್ಮದ ಬುನಾದಿಯ ಮೇಲೆ ನಿಂತಿವೆ. ಆದರೆ ಅಧ್ಯಾತ್ಮವನ್ನೇ ಬೆಳಸಿಕೊಂಡು ಆದಿ ಭೌತಿಕಜೀವನವನ್ನು ಭಾರತ ಮರೆಯಲಿಲ್ಲ. ಇಹಕ್ಕಿಂತ ಪರಕ್ಕೆ ಬೆಲೆಯನ್ನೇನೋ ಕೊಟ್ಟಿತು; ಆದರೆ ಪರಕ್ಕೆ ಹೋಗುವುದಕ್ಕೆ ಇಹವೊಂದು ಹಂತವೆಂಬುದನ್ನು ಪ್ರತಿಪಾದಿಸಿತು. ಭಾರತದ ಮಹಾಪುರುಷರಾದ ಜನಕ, ರಾಮ, ಕೃಷ್ಣರು ತಮ್ಮ ಜೀವನರಥಕ್ಕೆ ಇಹ ಪರವೆಂಬ ಎರಡು ಅಶ್ವಗಳನ್ನು ಕಟ್ಟಿದ ಮಹಾನುಭಾವರು.

೩) ಭಾರತದ ಸಂಸ್ಕೃತಿ ಎಂದೋ ಆಗಿ ಹೋದ ಕತೆಯಲ್ಲ. ಅದು ಇಂದಿಗೂ ಸಜೀವವಾಗಿ ಜನಪದದ ರಕ್ತದಲ್ಲಿ ಬೆರೆತು ಹೋಗಿದೆ.

೪) ಭಾರತ ಸಂಸ್ಕೃತಿ ಹಲವು ಪ್ರಕಾರಗಳಲ್ಲಿ, ವಿಧಗಳಲ್ಲಿ ಬೆಳೆದರೂ ಅದರಲ್ಲಿ ಒಂದು ಏಕಮುಖತೆ ಇದೆ. ವ್ಯಷ್ಟಿ ಬೆಳೆದು, ಎಷ್ಟೇ ದೊಡ್ಡವನಾದರೂ ಅವನು ಸಮಷ್ಟಿಗಿಂತ ದೊಡ್ಡವನಲ್ಲ ಎಂಬ ಭಾವನೆ ಭಾರತದಲ್ಲಿ ಮೊದಲಿನಿಂದಲೂ ಬೆಳೆದುಬಂದಿದೆ.

೫) ಹಿಂದೂ ಧರ್ಮ ಯಾವ ವ್ಯಕ್ತಿಯನ್ನೂ ಅವಲಂಬಿಸಿಲ್ಲ. ಹಿಂದುಗಳು ಕ್ರೈಸ್ತ, ಮುಸ್ಲಿಮರಂತೆ ಒಬ್ಬ ಪ್ರವಾದಿಗೇ ತಮ್ಮೆಲ್ಲ ಧಾರ್ಮಿಕ ತತ್ವಗಳನ್ನು ಆರೋಪಿಸುವುದಿಲ್ಲ. ಜಗತ್ತಿಗೇ ಅನ್ವಯವಾಗುವ ತತ್ವಗಳ ಆಧಾರದ ಮೇಲೆ ಹಿಂದೂ ಧರ್ಮ ಬೆಳೆದು ಬಂದಿದೆ.

ಕರ್ನಾಟಕ ಸಂಸ್ಕೃತಿಯೆಂದು ಯಾವುದನ್ನು ನಾವು ನಿರ್ದೇಶನ ಮಾಡುತ್ತೇವೆಯೋ ಅದರಲ್ಲಿಯೂ ಈ ಗುಣಗಳು ಕಂಡುಬರುತ್ತವೆ. ಒಟ್ಟದಲ್ಲಿ ಗ್ರೀಕ್, ಲ್ಯಾಟಿನ್, ಆಂಗ್ಲೋಸ್ಯಾಕ್ಸನ್ ಸಂಸ್ಕೃತಿಗಳು ಹೇಗೆ ಭಾರತ ಸಂಸ್ಕೃತಿಯಿಂದ ಭಿನ್ನವಾಗಿವೆಯೋ ಹಾಗೆ ಕರ್ನಾಟಕ ಸಂಸ್ಕೃತಿ ಭಿನ್ನವಾಗಿಲ್ಲ. ಭಾರತವೆಂಬ ಭವ್ಯಸೌಧದಲ್ಲಿ ಕರ್ನಾಟಕ ಒಂದು ವಿಶಾಲವಾದ ಕೋಣೆ—ಸರ್ವಾಂಗ ಸುಂದರವಾದ ಕೋಣೆ.

ಕನ್ನಡ ನಾಡಿನ ಹಿತಚಿಂತನೆ ಮಾಡುವವರು ಪ್ರತ್ಯೇಕ ಮನೋಭಾವ ತಳೆಯುವುದು ಸಾಧ್ಯವಿಲ್ಲ. ಭಾರತದ ಹಿತದೊಂದಿಗೇ ಕರ್ನಾಟಕದ ಹಿತವೂ ಹಾಸುಹೊಕ್ಕಾಗಿ ಹೊಂದಿಕೊಂಡಿದೆ. ೧೯೪೭ ರ ಆಗಸ್ಟ್ ೧೫ನೇ ತಾರೀಖಾದನಂತರ ಇಂಥ ವಿಶಾಲಾ ನೋಟ ಭಾರತದ ಎಲ್ಲ ಪ್ರಾಂತ್ಯಗಳಲ್ಲಿಯೂ ಬೆಳೆಯುವುದಗತ್ಯವಾಗಿತ್ತು. ಬಹು ದಿನಗಳಿಂದ ನಾವು ಬಯಸಿ, ತಪಿಸಿ, ಶ್ರಮಿಸಿದ ಸ್ವಾತಂತ್ರ್ಯ ಕರಗತವಾದಾಗ ಅದನ್ನು ಶಾಶ್ವತವಾಗಿ ಉಳಿಸಿಕೊಳ್ಳುವುದರ ಕಡೆಗೆ ನಮ್ಮ ಲಕ್ಷ್ಯ ಹೋಗಬೇಕಾಗಿತ್ತು. ನಮ್ಮಲ್ಲಿದ್ದ ಸಣ್ಣ ಪುಟ್ಟ ಜಗಳಗಳಿಂದ ಭಾರತವನ್ನು ಹಿಂದೆ ಪರಕೀಯರ ಮಡುಲಿಗೆ ಹಾಕಿದೆವು. ಅದೇ ಪರಿಸ್ಥಿತಿಯನ್ನು ಮತ್ತೆ ತಂದುಕೊಂಡು ಬಡಿದಾಡಿದಲ್ಲಿ ನಾವು ಗಳಿಸಿರುವ ಸ್ವಾತಂತ್ರ್ಯ ನಮ್ಮ ಕೈ ಬಿಟ್ಟುಹೋಗುತ್ತದೆ.

ಸ್ವಾತಂತ್ರ್ಯ ಬಂದಾನಂತರ ನಮ್ಮ ಮುಂದೆ ಬೃಹದಾಕಾರ ತಳೆದು ನಿಂತಿರುವ ಪ್ರಶ್ನೆ ಪ್ರಾಂತ್ಯ ನಿರ್ಮಾಣದ್ದು. ಭಾಷಾನುವಾರು ಪ್ರಾಂತ್ಯ ನಿಯೋಜನೆಯಾದರೆ ಆಡಳಿತ ಸೌಕರ್ಯದ ದೃಷ್ಟಿಯಿಂದಲೂ, ಸಾಂಸ್ಕೃತಿಕ ಸಂವರ್ಧನ ದೃಷ್ಟಿಯಿಂದಲೂ ತುಂಬ ಅನುಕೂಲವಾಗುತ್ತದೆ ಎಂಬ ತತ್ವವನ್ನು ಮೋತಿಲಾಲ ನೆಹ್ರು ಸಮಿತಿಯವರೇ ಬಹಳ ಹಿಂದೆ ಒಪ್ಪಿಕೊಂಡಿದ್ದಾರೆ. ಇಂದು ಕೇಂದ್ರ ಸರ್ಕಾರದಲ್ಲಿ ವರಿಷ್ಠಸ್ಥಾನಗಳಲ್ಲಿರುವ ಮಹಾನಾಯಕರು ಈ ತತ್ವವನ್ನೇ ಪ್ರತಿಪಾದಿಸುತ್ತ ಬಂದಿದ್ದಾರೆ. ಆದರೆ ಈಚೆಗೆ ನಿರ್ಮಿತವಾದ ಧಾರ್ ಸಮಿತಿ ಭಾಷಾನುವಾರು ಪ್ರಾಂತ್ಯ ವಿಂಗಡನೆಯನ್ನು ವಿರೋಧಿಸಿದೆ. ಪ್ರಾಂತ್ಯಗಳು ಇತ್ತೀಚೆಗೆ ತೋರುತ್ತಿರುವ ಪ್ರತ್ಯೇಕ ಮನೋಭಾವ, ದ್ವೇಷಾಸೂಯೆಗಳನ್ನು ಕಂಡು ಕೇಂದ್ರದಲ್ಲಿರುವ ನಾಯಕರು ಭಾಷಾನುವಾರು ಪ್ರಾಂತ್ಯ ರಚನೆ ಭಾರತವನ್ನು ಚೂರುಚೂರಾಗಿ ಒಡೆದು ತುಮುಲ ವಿಪ್ಲವದಲ್ಲಿ—ಸ್ವಯೂಥಕಲಹದಲ್ಲಿ ಕೆಡವುತ್ತದೆ ಎಂಬ ನಿರ್ಧಾರಕ್ಕೆ ಬಂದಿದ್ದಾರೆ. ಅವರ ಭಯ ನಿರಾಧಾರವಾದುದಲ್ಲ. ಹಿಂದೂಸ್ಥಾನ ವಿಭಜನೆಯಾದ ಮೇಲೆ ನಡೆದ ಘಟನೆಗಳು ಇನ್ನೂ ನಮ್ಮ ಮನಸ್ಸಿನಿಂದ ಅಳಿಸಿಹೋಗಿಲ್ಲ. ಪಾಕಿಸ್ತಾನ ಚಳುವಳಿಗೆ ದೊರೆತ ವಿಜಯ ಕಂಡು

ವಿಭ್ರಾಂತರಾದ ಇತರ ಕೆಲವು ಪಂಗಡದವರು ಅಕಾಲಿಸ್ಥಾನ, ದ್ರಾವಿಡ ಸ್ಥಾನಗಳನ್ನು ಬೇಡುತ್ತಿದ್ದಾರೆ. ಹಲವು 'ಸ್ಥಾನ' ಗಳ ನಿರ್ಮಾಣದಿಂದ ಭಾರತದ ಸ್ಥಾನಭದ್ರತೆಗೇ ಆಘಾತವಾಗುತ್ತದೆಂಬುದು ನಿರ್ವಿವಾದ. ಪ್ರಾಂತ್ಯ ನಿರ್ಮಾಣವಾಗುವುದಕ್ಕೆ ಮುಂಚೆ ಅಖಿಲ ಭಾರತ ಕಲ್ಪನೆ ಜನತೆಯ ಮನಸ್ಸಿನಲ್ಲಿ ಆಳವಾಗಿ ಬೇರೂರಬೇಕು.

ಆದರೆ ಭಾಷಾನುವಾರು ಪ್ರಾಂತ್ಯ ನಿರ್ಮಾಣ ಪ್ರಶ್ನೆಯನ್ನು ಕೇಂದ್ರ ಸರ್ಕಾರ ಮುಂದೆ ತಳ್ಳುವುದು ವಿಹಿತವಾಗಿಲ್ಲ. ಆಂಧ್ರ, ಮಹಾರಾಷ್ಟ್ರ, ಕರ್ಣಾಟಕ, ಕೇರಳಗಳಲ್ಲಿ ಈ ಬಗ್ಗೆ ಜನತೆಯಲ್ಲಿ ತುಂಬ ಅಸಂತೋಷ ಹುಟ್ಟಿದೆ ಮಿಕ್ಕ ಪ್ರಾಂತ್ಯಗಳಿಗಿಂತಲೂ ಕರ್ಣಾಟಕಕ್ಕೆ ಇದು ಮಹತ್ವದ ಪ್ರಶ್ನೆ. ಭಾಷಾನುವಾರ ಪ್ರಾಂತ್ಯ ತತ್ವವನ್ನು ಕೇಂದ್ರ ಸರ್ಕಾರ ಕಾರ್ಯೋನ್ಮುಖ ಮಾಡದಿದ್ದರೆ ಕರ್ಣಾಟಕ ಉಳಿಯುವುದು ದುಸ್ತರವಾಗುತ್ತದೆ. ಹಿಂದಿನ ಆಡಳಿತಗಾರರ ಕೌಟಿಲ್ಯದಿಂದ ಕರ್ನಾಟಕ ಒಡೆದು ಚೂರಾಗಿದೆ ಹಲವು ಭಾಷಾ ಪ್ರಾಬಲ್ಯವುಳ್ಳ ಸರಕಾರಗಳ ಕೈಗೆ ಸಿಕ್ಕಿ ಅದು ಕೊರಗಿದೆ—ಕೊರಗುತ್ತಲೂ ಇದೆ. ಕನ್ನಡ ನಾಡಿನ ಮಕ್ಕಳಿಗೆ ಕನ್ನಡದಲ್ಲಿ ಶಿಕ್ಷಣ ದೊರೆಯುವುದು ದುರ್ಲಭವಾಗಿದೆ. ಅವರ ಪ್ರಾಚೀನ ಇತಿಹಾಸ ಕಲಾ ಅವಶೇಷಗಳು ಮಣ್ಣುಗೂಡಿಹೋಗುತ್ತಿವೆ. ಈಗಿನ ಸರ್ಕಾರದ ರೀತಿ ಕನ್ನಡ ಜನಕ್ಕೆ 'ಭಾರತೀಯತ್ವ' ವನ್ನು ಕಲಿಸುತ್ತಿಲ್ಲ; ಅವರನ್ನು ತಮಿಳರ, ಮಹಾರಾಷ್ಟ್ರ, ತೆಲುಗರ ಕೇರಳೀಯರ ದಬ್ಬಾಳಿಕೆಗೆ ತಳ್ಳುತ್ತಿದೆ. ಕನ್ನಡನಾಡು, ಕನ್ನಡ ಜನ ಬದುಕಬೇಕಾದರೆ ಅವರ ಹಂಚಿ ಹೋಗಿರುವ ಪ್ರದೇಶಗಳನ್ನು ಒಗ್ಗೂಡಿಸಿದ ಪ್ರಾಂತ್ಯವಾಗಲೇಬೇಕು.

ಕನ್ನಡ ನಾಡು, ಹೆಚ್ಚು ಕಡಿಮೆ ಐದು ಭಾಗವಾಗಿದೆ.
(೧) ಮುಂಬಯಿ ಸರ್ಕಾರದ ಆಧಿಪತ್ಯದ ಕೆಳಗಿರುವ ಕನ್ನಡ ಜಿಲ್ಲೆಗಳು, (೨) ಮದರಾಸು ಸರಕಾರದ ಆಧಿಪತ್ಯದ ಕೆಳಗಿರುವ ಕನ್ನಡ ಜಿಲ್ಲೆಗಳು, (೩) ಉತ್ತರ ಕರ್ಣಾಟಕದ ಆಶ್ರಿತ ಸಂಸ್ಥಾನಗಳು, (೪) ನಿಜಾಮರ ಸಂಸ್ಥಾನಕ್ಕೆ ಸೇರಿರುವ ಕನ್ನಡ ಜಿಲ್ಲೆಗಳು, (೫) ಮೈಸೂರು ಸಂಸ್ಥಾನ. ಮೈಸೂರು ಸಂಸ್ಥಾನ ಉಳಿದ ಭಾಗಗಳ ಮೊತ್ತಕ್ಕಿಂತ ಸ್ವಲ್ಪ ಚಿಕ್ಕದ್ದು,

ಸ್ಟೈಸೂರು ಬಿಟ್ಟುಕೊಟ್ಟ ಪ್ರತ್ಯೇಕ ಪ್ರಾಂತ್ಯ ನಿರ್ಮಾಣ ಮಾಡುವುದು ಕರ್ನಾಟಕ ಪ್ರಾಂತ್ಯದ ಭವಿಷ್ಯತ್ತಿನ ದೃಷ್ಟಿಯಿಂದ ಶ್ರೇಯಸ್ಕರವಾದುದಲ್ಲ.

ಈ ಐದು ಭಾಗಗಳನ್ನೂ ಒಟ್ಟುಗೂಡಿಸಿದ ಪ್ರಾಂತ್ಯ ನಿರ್ಮಾಣವಾಗಬೇಕೆಂದು ಕನ್ನಡ ನಾಡಿನಲ್ಲಿ ೧೯೧೭ರಿಂದ ಚಳುವಳಿ ನಡೆದಿದೆ. ಕನ್ನಡ ನಾಡಿನ ವಿವಿಧ ಭಾಗಗಳ ಸಾಹಿತಿಗಳು, ತತ್ವ ಜ್ಞಾನಿಗಳು, ಸಮಾಜ ಧುರೀಣರು ಈ ಮೂವತ್ತೈದು ವರ್ಷಕಾಲ ಏಕೀಕರಣ ಮಂತ್ರವನ್ನು ಜಪಿಸುತ್ತಿದ್ದಾರೆ. ದೇಶಕ್ಕೆ ಸ್ವಾತಂತ್ರ್ಯ ಬಂದಕೂಡಲೆ ಈ ಕನಸು ಕಣಸಾಗುವುದೆಂದು ಅವರು ದೃಢವಾಗಿ ನಂಬಿದ್ದರು. ಆದರೆ ಕನಸು ಒಡೆದು ಹೋಗಿದೆ.

ಇದಕ್ಕೆ ದೇಶದ ಪ್ರಕೃತ ಪರಿಸ್ಥಿಯಿಂದ ಪ್ರೇರಿತವಾದ ಕೇಂದ್ರ ಸರ್ಕಾರದ ನೀತಿಯೊಂದೇ ಕಾರಣವಾಗಿಲ್ಲ. ಕನ್ನಡಿಗರ ಸ್ವಯೂಥ ಕಲಹವೂ ಕಾರಣವಾಗಿದೆ. 'ಮೈಸೂರಿನ ಹೆಸರನ್ನು ಅಳಿಸಿ ಬಿಡುತ್ತೇವೆ. ಮೈಸೂರಿನ ಮೇಲೆ ದಂಡಯಾತ್ರೆಮಾಡಿ ಅದನ್ನು ವಶಪಡಿಸಿಕೊಳ್ಳುತ್ತೇವೆ' ಎಂದು ಉಗ್ರಗಾಮಿಗಳಾದ ಕೆಲವು ಉತ್ತರ ಕರ್ನಾಟಕದ ಮುಖಂಡರು, ಪತ್ರಿಕಾಕರ್ತರು ಸಾರಿ ಮೈಸೂರಿನವರ ಮನಸ್ಸಿನಲ್ಲಿಲ್ಲದ ಭೀತಿ, ಕ್ರೋಧವನ್ನು ಕೆರಳಿಸಿದ್ದಾರೆ. ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಗೆ ಮುಂಚೆ ಏಕೀಕರಣವಾದಿಗಳಾಗಿದ್ದ ಕೆಲವು ನಾಯಕರು ಸಂಕುಚಿತ ಮನಸ್ಕರಾಗಿ 'ಮೈಸೂರು ಪ್ರತ್ಯೇಕ ಪ್ರಾಂತವಾಗಿಯೇ ಉಳಿಯಬೇಕು. ಅದಕ್ಕೆ ಉತ್ತರ ಕರ್ನಾಟಕದ ಸಂಪರ್ಕಬೇಕಿಲ್ಲ. ಮೈಸೂರಿನ ಸಾಂಸ್ಕೃತಿಕ ವೈಶಿಷ್ಟ್ಯಚಿರಸ್ಥಾಯಿಯಾಗಿರಬೇಕು' ಎಂದು ಸಾರುತ್ತಿದ್ದಾರೆ. ಮೂವತ್ತೈದು ವರ್ಷ ಸಾಹಿತಿಗಳ ದುಡಿದು ಬೆಳೆಸಿದ ಸ್ನೇಹ ಸೌಹಾರ್ದವನ್ನು ನಾಲ್ಕು ಜನ ಕಿಳಿಗೇಡಿಗಳು ಹಾಳು ಮಾಡಿದ್ದಾರೆ.

ಸಂಸ್ಕೃತಿಯ ದೃಷ್ಟಿಯಿಂದ ಮೈಸೂರು ಕನ್ನಡ ನಾಡಿನ ಇತರ ಭಾಗಗಳಿಗಿಂತ ಪ್ರಗತಿಶೀಲವಾಗಿದೆ ಎನ್ನುವುದು ಸತ್ಯ. ಇದೇ ಕಾರಣಕ್ಕೇ ಮೈಸೂರು ಕನ್ನಡ ನಾಡಿನ ಇತರ ಭಾಗಗಳನ್ನು ತನ್ನ ಉಡಿಯಲ್ಲಿ ಹಾಕಿ

ಕೊಂಡು, ಸರ್ವಸಮ್ಮತವಾದ ರಾಜ್ಯಾಂಗ ನಿಯೋಜನೆ ಮಾಡಬೇಕು. ಚಿಕ್ಕದೇವರಾಯನ ಕಾಲದಿಂದ (೧೭ನೆಯ ಶತಮಾನ) ನಾಲ್ಮಡಿ ಕೃಷ್ಣ ರಾಜವೊಡೆಯುವರವರಿಗೆ ಮೈಸೂರಿನಲ್ಲಿ ಸಾಹಿತ್ಯ, ಕಲೆಗಳು ವಿಶೇಷವಾಗಿ ವರ್ಧಿಸಿವೆ. ಬೇಲೂರು, ಹಳೆಯಬೀಡು, ಸೋಮನಾಥಪುರ, ಶ್ರವಣ ಬೆಳಗೊಳ, ತಲಕಾಡು ಮೈಸೂರು ಸಂಸ್ಥಾನದಲ್ಲಿವೆ. ಷಡಕ್ಷರಿ, ಲಕ್ಷ್ಮೀಶ, ಅಲ್ಲಮ ಪ್ರಭು, ಅಕ್ಕಮಹಾದೇವಿ, ಗುಬ್ಬಿ ಮಲ್ಲಣಾರ್ಯ, ನಿಜಗುಣ ಶಿವಯೋಗಿ, ಮೈಸೂರಿನವರು—ಹಾಗೆ ಐಹೊಳೆ, ಪಟ್ಟದಕಲ್ಲು, ಹಂಪೆ, ಬಾದಾಮಿ, ಅಜಂತ, ವೇರೂಳ, ವಿಜಾಪುರ, ಮೂಡಬಿದ್ರೆ, ಇಟ್ಟಗಿ, ಕೊಪ್ಪಳ, ಬನವಾಸಿ ಮೈಸೂರ| ಹೊರಗೆ ಕರ್ಣಾಟಕದ ಇತರ ಭಾಗ ಗಳಲ್ಲಿವೆಯೆಂಬುದನ್ನು ಮರೆಯಬಾರದು. ಪಂಪ, ರನ್ನ, ಬಸವಣ್ಣ, ಹರಿಹರ, ರತ್ನಾಕರವರ್ಣಿ, ಮುದ್ದಣ, ನಾರಣಪ್ಪ, ನರಹರಿ, ಹರಿದಾಸರು, ಶಿಶುನಾಳ ಶರೀಫ, ಮೈಸೂರಿನ ಹೊರಗಿನವರೆಂಬುದು ನಮ್ಮ ನೆನಪಿನಲ್ಲಿ ರಬೇಕು. ಈಯೆಲ್ಲ ಮಹಾನುಭಾವರು ಕಟ್ಟಿದ ನಾಡಲ್ಲವೇ ಕನ್ನಡ ನಾಡು. ಮೈಸೂರಿನವರು, ಮೈಸೂರಿನ ಹೊರಗಿನವರು, ದಕ್ಷಿಣ ಕನ್ನಡ ಜಿಲ್ಲೆಯವರು, ಉತ್ತರ ಕರ್ಣಾಟಕದವರು ಎಂದು ವಿಂಗಡಿಸುವ ಮನೋ ಭಾವ ಪ್ರತಿಗಾಮಿತ್ವದ ಲಕ್ಷಣ. ಅಖಿಲ ಭಾರತದಲ್ಲಿಯೇ ಒಬ್ಬರನ್ನು ಬಿಟ್ಟೊಬ್ಬರು ಬಾಳುವುದು, ಬದುಕುವುದು ಸಾಧ್ಯವಿಲ್ಲದಿರುವಾಗ ಕರ್ನಾಟ ಕದೊಳಗೆ ಮತ್ತಷ್ಟು ಸಣ್ಣ ಪುಟ್ಟ ಕೋಟೆ ಕಟ್ಟಿಕೊಂಡು ಬಾಳುವುದು ಸಾಧ್ಯವೇ ? ಮೈಸೂರು ಮೈಸೂರಿನವರಿಗೆ, ಮಂಗಳೂರು ಮಂಗಳೂರವರಿಗೆ ಎಂದು ಪ್ರತಿಪಾದಿಸುವುದು ವಿವೇಕತನದ ಲಕ್ಷಣವೇ ?

ಕರ್ನಾಟಕಕ್ಕೆ ಇದೇ ಈಗ ಒಂದು ವಿಶ್ವವಿದ್ಯಾನಿಲಯ ಲಭಿಸಿದೆ. ಸದ್ಯಕ್ಕೆ ಅದು ಉತ್ತರ ಕರ್ಣಾಟಕಕ್ಕೆ ಸಂಬಂಧಪಟ್ಟದಾಗಿದ್ದರೂ ಕಾಲ ಕ್ರಮೇಣ ಕರ್ನಾಟಕದ ಇತರ ಭಾಗಗಳನ್ನೂ ಸಮಾವೇಶಮಾಡಿ ಕೊಳ್ಳುತ್ತದೆ. ಮೈಸೂರು, ಕರ್ನಾಟಕ ವಿಶ್ವವಿದ್ಯಾನಿಲಯಗಳು ಮುಂದೆಯಾದರೂ ಒಂದುಗೂಡಿ ಅಖಿಲ ಕರ್ಣಾಟಕದ ವಿಶ್ವವಿದ್ಯಾ ನಿಲಯವಾಗಬೇಕು. ಎಲ್ಲ ಭಾಗದ ಕನ್ನಡಿಗರಿಗೂ ಒಂದೇ ಬಗೆಯ ಪಠ್ಯ ಪುಸ್ತಕಗಳಿರಬೇಕು. ಈ ವಿಶ್ವವಿದ್ಯಾನಿಲಯ ಕೇವಲ ಜೀವನೋ

ಪಾಯ ಸಾಧನೆಗೆ ವಿದ್ಯಾರ್ಥಿಗಳನ್ನು ನಿರ್ಮಿಸುವ ಕಾರ್ಖಾನೆಯಾಗದೆ ಸಾಹಿತ್ಯ, ಕಲೆ, ವಿಜ್ಞಾನ, ರಾಜಕಾರಣ, ಅರ್ಥಶಾಸ್ತ್ರಗಳ ಆಳವಾದ ತಿಳುವನ್ನು ಕೊಡುವ ವಿದ್ಯಾನಿಧಿಗಳಾಗಬೇಕು.

ವಿಶ್ವವಿದ್ಯಾನಿಲಯದ ಮಾತಿಗೆ ಸಂಬಂಧಪಟ್ಟಂತೆ ಭಾಷೆಗಳ ಸ್ಥಾನವನ್ನು ಕುರಿತು ನಾಲ್ಕು ಮಾತು ಹೇಳುವುದು ಅವಶ್ಯವಾಗಿದೆ. ಕೀರ್ತಿಶೇಷ ಶ್ರೀ ಎನ್. ಎಸ್. ಸುಬ್ಬರಾಯರವರ ಪ್ರಯತ್ನದಿಂದಾಗಿ ಮೈಸೂರಿನಲ್ಲಿ ಪ್ರೌಢ ವಿದ್ಯಾಶಾಲೆಯವರೆಗೆ ಕನ್ನಡ ಮಾಧ್ಯಮ ರೂಢಿಗೆ ಬಂತು. ವಿಶ್ವವಿದ್ಯಾನಿಲಯ ಕನ್ನಡ ಮಾಧ್ಯಮವನ್ನು ಆಚರಣೆಗೆ ತರಲು ಇನ್ನೂ ವಿಾನ ಮೇಷ ಎಣಿಸುತ್ತಿದೆ. ಜ್ಞಾನಪ್ರಸಾರ ಯುಕ್ತರೀತಿಯಲ್ಲಿ ಆಗುವುದಕ್ಕೆ ದೇಶಭಾಷೆಯೇ ಪರಮೋತ್ಕೃಷ್ಟ ಸಾಧನವೆಂಬಂಶ ಹೊಸದಲ್ಲ. ಈ ಮಧ್ಯೆ ದೇಶಭಾಷೆಗಳನ್ನು ಮೂಲೆಗೆ ತಳ್ಳಿ ಹಿಂದಿಯನ್ನು ಅವುಗಳ ಸ್ಥಾನದಲ್ಲಿಯೂ, ಸದ್ಯ ಇಂಗ್ಲಿಷ್ ಇರುವ ಸ್ಥಾನದಲ್ಲಿಯೂ ಕೂಡಿಸಬೇಕೆಂಬ ಪ್ರಯತ್ನ ಬಲು ವೇಗವಾಗಿ ಸಾಗಿದೆ. ಹಿಂದಿಯನ್ನು ಕನ್ನಡದ ತಲೆಯ ಮೇಲೆ ತಂದುಹಾಕುವ ಪ್ರಯತ್ನ ಯಾರು ಮಾಡಿದರೂ ಕನ್ನಡಿಗರು ಸಹಿಸಬಾರದು. ಇಂಗ್ಲಿಷಿನ ಸ್ಥಾನದಲ್ಲಿ ಹಿಂದಿ ನಿಲ್ಲುವ ಮಾತಂತಿರಲಿ; ಕನ್ನಡ, ತಮಿಳು, ತೆಲುಗು, ಮರಾಟಿ ಮೊದಲಾದ ದೇಶಭಾಷೆಗಳ ಸ್ಥಾನದಲ್ಲಿ ನಿಲ್ಲುವುದಕ್ಕೂ ಹಿಂದಿಗೆ ಸಾಕಷ್ಟು ಬಲವಿಲ್ಲ. ಭಾರತದ ಬಹುಸಂಖ್ಯಾತ ಜನ ಹಿಂದಿ ಭಾಷೆಯನ್ನಾಡುತ್ತಾರೆ.—ಅದು ವ್ಯವಹಾರಕ್ಕೆ ಅನುಕೂಲವಾದ ಭಾಷೆ ಎನ್ನುವ ಅಂಶವಷ್ಟೇ ಸಾಲದು ಒಂದು ನಾಡಿನ ಸಂಸ್ಕೃತಿಯನ್ನು ಕಟ್ಟುವ ಭಾಷೆಗೆ.

ಮುಂದಿನ ಶಿಕ್ಷಣ ಕ್ರಮದಲ್ಲಿ ಹಿಂದಿಯನ್ನು ಸಮಾವೇಶಗೊಳಿಸುವುದು ಅನಿವಾರ್ಯ. ಆದರೆ ದೇಶ ಭಾಷೆಗಳಿಗೆ ಪ್ರಥಮ ಸ್ಥಾನವಿರಬೇಕು. ಇಂಗ್ಲಿಷ್ ಇನ್ನು ನಮಗೆ ಆಳರಸರ ಭಾಷೆಯಲ್ಲ. ಅದನ್ನು ಯಾರೂ ನಮ್ಮ ತಲೆಯಮೇಲೆ ಹಾಕಿ ನಮ್ಮನ್ನು ದಾಸ್ಯದಲ್ಲಿಟ್ಟಿರಲು ಪ್ರಯತ್ನಿಸುತ್ತಿಲ್ಲ. ನಮ್ಮ ಭಾಗಕ್ಕೆ ಈಗ ಇಂಗ್ಲಿಷ್ ಅಂತರರಾಷ್ಟ್ರೀಯ ಭಾಷೆ. ವಿಶ್ವದ ಪರಿಚಯ, ಸಂಬಂಧಕ್ಕೆ ಇಂಗ್ಲಿಷ್ ಸುವರ್ಣದ್ವಾರ. ಆ ಭಾಷೆಯ ಸಂಪತ್ತು ನಮ್ಮ ಯಾವ ದೇಶಭಾಷೆಗೂ ಇಲ್ಲ. ನಮ್ಮ ಸಂಸ್ಕೃತಿಯ ವಿಸ್ತರ

ಣಕ್ಕೆ, ಪೋಷಣೆಗೆ, ಬೆಳವಳಿಗೆಗೆ ಹಾಗೂ ವಿಶಾಲ ಜಗತ್ತಿನೊಂದಿಗೆ ನಾವು ಬಾಂಧವ್ಯ ಬೆಳೆಸಲು ಇಂಗ್ಲಿಷ್ ನಮಗೆ ಬೇಕೇ ಬೇಕು. ಇಂಗ್ಲಿಷರು ಹಿಂದೆ ನಮಗೆ ಮಾಡಿದ ಅನ್ಯಾಯವನ್ನು ನೆನೆದು ನಾವು ಇಂಗ್ಲೀಷ್ ಭಾಷೆಯನ್ನು ಭಾರತದಿಂದ ಆಚೆಗಟ್ಟಿದರೆ ಆತ್ಮಘಾತಮಾಡಿಕೊಂಡಂತೆಯೇ ಸರಿ.

ಕೀರ್ತಿಶೇಷರಾದ ಮೈಸೂರಿನ ಶ್ರೀಮದ್ಯುವರಾಜರವರ ಸ್ಮಾರಕಾರ್ಥವಾಗಿ ಒಂದು 'ಕಲಾಪರಿಷತ್ತ'ನ್ನು (*Arts Acadamy*) ಸ್ಥಾಪಿಸುವ ಪ್ರಯತ್ನ ಮೈಸೂರಿನಲ್ಲಿ ನಡೆದಿದೆ ಇದು ಸ್ತುತ್ಯವಾದ ಪ್ರಯತ್ನ, ಈವರೆಗೆ ಕರ್ನಾಟಕದ ಯಾವ ಭಾಗದಲ್ಲಿಯೂ ಒಂದು ಕಲಾಪರಿಷತ್ತಿಲ್ಲ. ಶ್ರೀಮದ್ಯುವರಾಜರವರ ನಾಮಾಂಕಿತವಾದ ಈ ಪರಿಷತ್ತು ಕನ್ನಡ ನಾಡಿನ ಕಲೆಗಳ ಪುರೋಭಿವೃದ್ಧಿಗೆ ಸಾಧಕವಾಗಲೆಂದು ಹಾರೈಸುತ್ತೇನೆ.

ಕನ್ನಡ ನಾಡಿನ ಸಂಸ್ಕೃತಿ ಬೆಳೆಯಲು ನಮ್ಮ ಸರ್ಕಾರ ಹಾಗೂ ಪ್ರಜಾವರ್ಗ ಜಾಗೃತರಾಗಿ ಯುಕ್ತ ಕಾರ್ಯಕ್ರಮ ಕೈಗೊಳ್ಳಬೇಕಾದುದು ಅವಶ್ಯಕ. ಇದುವರೆಗೆ ಎಲ್ಲ ದೋಷವನ್ನು ನಮ್ಮನ್ನಾಳುತ್ತಿದ್ದ ಇಂಗ್ಲಿಷರ ಮೇಲೆ ಹಾಕಿ ನಾವು ತೆಪ್ಪಗೆ ಕೂಡುತ್ತಿದ್ದೆವು. ಈಗ ನಮ್ಮನ್ನು ನಾವೇ ಆಳಿಕೊಳ್ಳುತ್ತಿದ್ದೇವೆ. ಇನ್ನಾದರೂ ನಾವು ಕಣ್ದೆರೆಯಬೇಡವೇ ?

ಸಂಸ್ಕೃತಿಯ ಸಂವರ್ಧನಕ್ಕೆ ಪ್ರಾಚೀನತೆಯ ರಕ್ಷಣೆ, ಪೋಷಣೆಗಳಗತ್ಯ. ಹಿಂದಿನವನ್ನು ಬಿಟ್ಟು ನಾವು ಎಲ್ಲವನ್ನೂ ರಷ್ಯಾ ಮಾದರಿಯಲ್ಲಿ, ಅಮೆರಿಕೆಯ ಮಾದರಿಯಲ್ಲಿ ಕಟ್ಟುವೆವೆಂಬುದು ಅರ್ಥವಿಲ್ಲದ, ಮಾತು. ನಮ್ಮ ಅರ್ವಾಚೀನ ಸಂಸ್ಕೃತಿ ಇಂಗ್ಲೆಂಡ್, ಅಮೇರಿಕಾ, ರಷ್ಯಾಗಳ ಪಡಿಯಚ್ಚಾಗಬಾರದು. ನಮ್ಮ ಸಂಸ್ಕೃತಿ ನಮ್ಮ ಪರಂಪರೆಯ ಹಾಗೂ ಜನತೆಯ ಅಪಾರ ಸಾಧನೆಯ ಫಲವಾಗಬೇಕು. ಕರ್ನಾಟಕದಲ್ಲಿ ಸದ್ಯ ರಾಜ್ಯಸೂತ್ರಗಳನ್ನು ಹಿಡಿದಿರುವವರ ಲಕ್ಷ್ಯ ಈ ಕೆಲವು ವಿಷಯುಗಳ ಕಡೆಗೆ ಬೀಳಲೆಂದು ನನ್ನ ಹಾರೈಕೆ.

೧. ಸಾಹಿತ್ಯ ಪೋಷಣೆಗೆ ಕನ್ನಡ ನಾಡಿನಲ್ಲಿ ಯಾವ ಪ್ರಯತ್ನವೂ ನಡೆದಿಲ್ಲ. ನಾಡಿನ ಲೇಖಕರ ಕಷ್ಟಸುಖ ವಿಚಾರಿಸುವುದು ಸರ್ಕಾರಕ್ಕೂ ಬೇಡವಾಗಿದೆ, ಸಾರ್ವಜನಿಕರಿಗೂ ಬೇಡವಾಗಿದೆ. ಗ್ರಂಥ ಪ್ರಕಟನೆ,

ಪ್ರಸಾರಕ್ಕಿರುವ ತೊಂದರೆ ಪರಿಹಾರವಾಗಬೇಕಾಗಿದೆ. ಸಾಹಿತ್ಯವನ್ನು ಒಂದು ತಪಸ್ಸೆಂದು ಭಾವಿಸಿ ಶ್ರಮಿಸುತ್ತಿರುವವರ ಹಿತ ಸಂರಕ್ಷಣೆ ಮಾಡಬೇಕಾದುದು ಸರ್ಕಾರದ ಹಾಗೂ ಜನತೆಯ ಕರ್ತವ್ಯ. ಇಂದು ಕನ್ನಡದಲ್ಲಿ ಕತೆ, ಕಾದಂಬರಿ ಬರೆದರೆ ಪ್ರಕಾಶಕರು ದೊರೆಯುತ್ತಾರೆ. ಆಳವಾಗಿ ವಿಚಾರ ಮಾಡಿದ ಲಕ್ಷಣಗಳು, ಶಾಸ್ತ್ರ ಗ್ರಂಥಗಳು, ವೈಜ್ಞಾನಿಕ ಗ್ರಂಥಗಳು ಬರೆದಲ್ಲಿ ಅಚ್ಚುಹಾಕುವವರು ಕೂಡ ಸಿಕ್ಕುವುದಿಲ್ಲ. ಇತರ ಪ್ರಾಂತ್ಯ ಭಾಷೆಗಳಿಗೂ ಅನುವಾದಗೊಂಡು, ಅವುಗಳ ಜ್ಞಾನ ಸಂಪತ್ತಿಯನ್ನು ಹೆಚ್ಚಿಸುವ ಗ್ರಂಥಗಳನ್ನು ರಚಿಸಬಲ್ಲ ಪಂಡಿತರು, ವೈಜ್ಞಾನಿಕರು, ಸಾಹಿತಿಗಳು ಕನ್ನಡ ನಾಡಿನಲ್ಲಿದ್ದಾರೆ. ಆದರೆ ಅವರ ಸಾಧನೆಯ ಫಲ ಜನತೆಗೆ ಸಿಗುವುದೆಂತು?

ಕನ್ನಡದಲ್ಲಿ ಉತ್ತಮ ಸಾಹಿತ್ಯ ನಿರ್ಮಾಣವಾಗಬೇಕಾದರೆ ಓದುವವರ ಬಳಗ ಹೆಚ್ಚಬೇಕು. ನಮ್ಮ ಜನರ ಪರಭಾಷಾವ್ಯಾಮೋಹ ಕನ್ನಡಕ್ಕೆ ಕುತ್ತಾಗಿದೆ. ನಾವು ಹಲವು ಭಾಷೆಗಳನ್ನು ತಿಳಿದುಕೊಳ್ಳಬೇಕು, ಹಲವು ಸಾಹಿತ್ಯಗಳ ಪರಿಚಯ ಮಾಡಿಕೊಳ್ಳಬೇಕು, ಅವುಗಳ ಸಾರಸರ್ವಸ್ವವನ್ನು ಕನ್ನಡಕ್ಕೆ ತಂದು ಕನ್ನಡದ ಸಂಪತ್ತನ್ನು ಬೆಳೆಸಬೇಕು. ಆದರೆ ಕನ್ನಡವನ್ನು ಕೊರಗಿಸಿಯಲ್ಲ—ಕನ್ನಡ ಸಾಹಿತಿಗಳನ್ನು ಉಪವಾಸ ಕೆಡವಿಯಲ್ಲ—ನಮ್ಮ ಬುದ್ಧಿಶಕ್ತಿಯನ್ನು ಕಂಡವರ ಅಡಿಯಾಳು ಮಾಡಿಯಲ್ಲ.

ಓದುವವರ ಬಳಗ ಬೆಳೆಯಬೇಕಾದರೆ ನಮ್ಮ ಜನರಲ್ಲಿ ಸಾರ್ವತ್ರಿಕವಾಗಿರುವ ನಿರಕ್ಷರತೆ ನಿರ್ಮೂಲವಾಗಬೇಕು. ದೇಶದ ಪ್ರತಿಯೊಬ್ಬ ಪ್ರಜೆಯೂ ಅಕ್ಷರಸ್ಥನಾಗಬೇಕಾದುದು ನಾಡಿನ ಭವಿಷ್ಯತ್ತಿನ ದೃಷ್ಟಿಯಿಂದಾವಶ್ಯಕ. ಈ ಕೆಲಸವನ್ನು ಯಶಸ್ವಿಯಾಗಿ ಮೈಸೂರು ಅಕ್ಷರಪ್ರಚಾರ ಸಮಿತಿ (*Adult Literacy Council*) ನಿರ್ವಹಿಸುತ್ತಿದೆ. ಆದರೆ ಈ ಸಮಿತಿಯೂ ನಮ್ಮೆಲ್ಲರ ಆವಶ್ಯಕತೆಯನ್ನು ಪೂರೈಸಲಾರದು. ಆ ಪಕ್ಷ ಈ ಪಕ್ಷವೆಂದು ಒಣ ರಾಜಕೀಯದಲ್ಲಿ ತಮ್ಮ ಕಾಲ ವ್ಯಯಮಾಡುತ್ತಿರುವ ವಿದ್ಯಾರ್ಥಿಗಳು ಅಕ್ಷರ ಪ್ರಚಾರ ಕೆಲಸವನ್ನು ಕೈಗೆ ತೆಗೆದುಕೊಳ್ಳಬೇಕು.

ಕನ್ನಡ ನಾಡಿನಲ್ಲಿ ಸಂಶೋಧನಾಕಾರ್ಯ ವಿಶೇಷವಾಗಿ ಆಗಬೇಕಾಗಿದೆ. ಚಂದ್ರವಳ್ಳಿ, ಬ್ರಹ್ಮಗಿರಿ ಸಂಶೋಧನೆಗಳು ಕನ್ನಡ ನಾಡಿನ

ಚರಿತ್ರೆಯ ಮೇಲೆ ಎಂಥ ಬೆಳಕನ್ನು ಬೀರಿದಯೆಂಬುದನ್ನು ನಾವು ಬಲ್ಲೆವು. ಇಂಥ ನೂರಾರು ಸಂಶೋಧನಾ ಕೆಲಸಗಳಾಗಬೇಕಾಗಿದೆ. ಭೂಗರ್ಭದಲ್ಲಿ ಅಡಗಿರುವ ಐತಿಹಾಸಿಕ ಪಟ್ಟಣಗಳನ್ನು ದಕ್ಷರ ಸಹಾಯದಿಂದ ಪುನರುಜ್ಜೀವನಗೊಳಿಸಬೇಕಾಗಿದೆ. ಕ್ರಿಮಿಕೀಟಗಳಿಗೂ, ಹವಾಮಾನಕ್ಕೂ ಸಿಕ್ಕಿ ನಾಶವಾಗುತ್ತಿರುವ ಹಸ್ತಪ್ರತಿಗಳನ್ನು, ಶಿಲ್ಪಗಳನ್ನು ರಕ್ಷಿಸಬೇಕಾಗಿದೆ.

ಮೈಸೂರು ವಿಶ್ವವಿದ್ಯಾನಿಲಯ ಒಂದು ಬೃಹತ್ ಇಂಗ್ಲಿಷ್-ಕನ್ನಡ ಶಬ್ದಕೋಶವನ್ನು ಪ್ರಕಟಿಸಿ ಉಪಕಾರ ಮಾಡಿದೆ. ಕನ್ನಡ—ಕನ್ನಡ, ಸಂಸ್ಕೃತ-ಕನ್ನಡ ಶಬ್ದಕೋಶಗಳ ಆವಶ್ಯಕತೆ ಅಷ್ಟಿಷ್ಟೆಂದು ಬಣ್ಣಿಸಲು ಸಾಧ್ಯವಿಲ್ಲ. ಕನ್ನಡ ನಾಡಿನ ಯಶೋದುಂದುಭಿಯನ್ನು ಮೊಳಗಿಸುವ ಕನ್ನಡ ವಿಶ್ವಕೋಶ (*Kannada Encyclopedia*) ಬೇಕಾಗಿದೆ. ಅದನ್ನು ಹಲವು ಭಾಷೆಗಳಲ್ಲಿ ಪ್ರಕಟಿಸಿ ಲೋಕಕ್ಕೆ ಕನ್ನಡ ನಾಡಿನ ಹೆಚ್ಚಳವನ್ನು ಸಾರಬೇಕಾಗಿದೆ.

೨. ಕಲಾ ಪರಿಷತ್ತಿನಾವಶ್ಯಕತೆಯನ್ನು ಈ ಮೊದಲೇ ನಾನು ಪ್ರಸ್ತಾಪಿಸಿದ್ದೇನೆ. ಶಿಲ್ಪ, ವಾಸ್ತುಶಿಲ್ಪ, ಚಿತ್ರಕಲೆ, ನಾಟಕ, ನಾಟ್ಯಗಳಲ್ಲಿ ಕನ್ನಡ ನಾಡು ಬಹಳ ಮುಂದೆ ಹೋಗಿತ್ತು. ಅವುಗಳನ್ನು ಊರ್ಜಿತಗೊಳಿಸಬೇಕು. ಅವುಗಳಲ್ಲಿ ಅಳಿದುಳಿದಿರುವ ಕಲಾಕೃತಿಗಳನ್ನು ರಕ್ಷಿಸಿಕೊಳ್ಳಬೇಕು. ಚಲನ ಚಿತ್ರ, ಗ್ರಾಮಫೋನ್ ರಿಕಾರ್ಡಿಂಗ್ ಯಂತ್ರ ಸಹಾಯದಿಂದ ಹಳೆಯ ನಾಟಕ, ನಾಟ್ಯ, ಜಾನಪದ ಗೀತ ಪದ್ಧತಿಗಳನ್ನು ಸಂಗ್ರಹಿಸಬೇಕು. ಹಳ್ಳಿಗರ ಹಾಡುಗಳನ್ನೂ, ಹಾಡುವ ಪದ್ಧತಿಯನ್ನೂ ಸಂಗ್ರಹಿಸಬೇಕು. ಅವುಗಳೇ ನಮ್ಮ ಸಾಹಿತ್ಯ, ಸಂಗೀತ, ನಾಟ್ಯದ ಬೆನ್ನೆಲುಬು.

ಈಯೆಲ್ಲ ಕೆಲಸಗಳನ್ನು ನಿರ್ವಹಿಸಲು ಅಪಾರ ಹಣಬೇಕು. ಮೊದಲು ಈ ಕೆಲಸಗಳ ಮಹತ್ವ ಸರ್ಕಾರಕ್ಕೂ ಸಾರ್ವಜನಿಕರಿಗೂ ಅರ್ಥವಾಗಬೇಕು. ನಮ್ಮ ಶ್ರೀಮಂತರಲ್ಲಿ ಹಣವಿದೆ, ಅದು ವ್ಯಯವೂ ಆಗುತ್ತಿದೆ. ಆದರೆ ಯಾರಿಗಾಗಿ, ಏತಕ್ಕಾಗಿ? ನಿರರ್ಥಕ ನಿಯೋಜನೆಗಳಿಗೆ ಹಣವೊದಗಿಸುವ ಸರ್ಕಾರದಲ್ಲಿ ಹಣವಿಲ್ಲವೆ ? ಅದನ್ನು ಸಂಸ್ಕೃತಿಯ ಸಂವರ್ಧನಕ್ಕೆ ವಿನಿಯೋಗ ಮಾಡುವ ಮನೋಭಾವವಿಲ್ಲ. ರಾಜಕಾರಣ

ವೆಂದರೆ ಓಟಿನ ಬೇಟೆಯಲ್ಲ, ಪರ್ಮಿಟ್ಟುಗಳ ಪರದಾಟವಲ್ಲ, ಸ್ವಜಾತೀ ಯರಿಗೆ ಉದ್ಯೋಗ ಕೊಡಿಸುವ ವ್ಯಾಪಾರವಲ್ಲ. ರಾಜಕಾರಣವೆಂದರೆ ರಾಜ್ಯ ನಿರ್ಮಾಣ. ರಾಜ್ಯ ನಿರ್ಮಾಣವಾಗಬೇಕಾದರೆ ಅದರ ಸರ್ವತೋ ಮುಖ ಪ್ರಗತಿಯ ಸಾಧನೆಯಾಗಬೇಕು.

ಕನ್ನಡ ಸಂಸ್ಕೃತಿ ಭಾರತ ಸಂಸ್ಕೃತಿಯಿಂದ ಬೇರೆಯಲ್ಲ. ಆ ಮಹಾತಾಯಿಯ ಪುಣ್ಯಪುತ್ರಿ ಕನ್ನಡ ತಾಯಿ. ಕನ್ನಡ ನಾಡಿನ ಪ್ರಾಚೀನ ವೈಭವವನ್ನು ಮುಂದುವರಿಸಬೇಕಾದುದು ಕನ್ನಡ ನಾಡಿನ ಹಿತ ದೃಷ್ಟಿಯಿಂದ ಮಾತ್ರವಲ್ಲ—ಇಡೀ ಜಗತ್ತಿನ ಹಿತದೃಷ್ಟಿಯಿಂದ ಆವಶ್ಯಕ. ಕಡಲಾಚೆ ವೇದಾಂತದ ಕಹಳೆಯೂದಿ ಹಿಂದೆ ಸ್ವಾಮಿ ವಿವೇಕಾನಂದರು ಭಾರತ ಸಂಸ್ಕೃತಿಯ ಹೆಚ್ಚಳವನ್ನು ಸಾರಿದರು. ಇಂದು ಸಾವಿರ ವಿವೇಕಾ ನಂದರು ಆ ಕೆಲಸ ಮಾಡಬೇಕಾಗಿದೆ. ನಮ್ಮ ನಿಜಗುಣ ಶಿವಯೋಗಿ, ಅಲ್ಲಮ ಪ್ರಭು, ಶಂಕರಾಚಾರ್ಯ, ಕನಕದಾಸ, ಶ್ರೀರಾಮಕೃಷ್ಣ ಇವರ ಸಂದೇಶ ಕೇಳಲು ಪಾಶ್ಚಾತ್ಯ ಜಗತ್ತು ಹಾತೊರೆಯುತ್ತಿದೆ. ಮಹಾನುಭಾವ ಅಶೋಕ ಮಾಡಿದ ಕೆಲಸವನ್ನು ಇಂದು ನಾವು ಮುಂದುವರಿಸಬೇಕಾಗಿದೆ

ನನ್ನ ದೃಷ್ಟಿಯಲ್ಲಿ ಸಂಸ್ಕೃತಿ ವಿಶೇಷ ವಿಶಾಲವೂ ವ್ಯಾಪಕವೂ ಆದ ಅರ್ಥ ಪಡೆದಿದೆ. ಅದರ ವಿರಾಟಗರ್ಭದಲ್ಲಿ ಕರ್ನಾಟಕ, ಭಾರತ, ಯೂರೋಪು—ಇಡೀ ವಿಶ್ವ ಅಡಗಿದೆ. ಆ ಮಹಾಮೇರುವನ್ನು ಮುಟ್ಟ ಬೇಕಾದರೆ ಕರ್ನಾಟಕ—ಭಾರತ ಹಂತಗಳಾಗಿವೆ. ಭಾರತ ಧರ್ಮ, ಸಂಸ್ಕೃತಿ ಇಡೀ ಜಗತ್ತಿನ ಕಲ್ಯಾಣಕ್ಕಾಗಿಯೇ ಹುಟ್ಟಿದುದು.

ಭಗವಾನ್ ಶ್ರೀಕೃಷ್ಣ ಭಾರತೀಯರ ದೃಷ್ಟಿ, ಸಂಸ್ಕೃತಿಯನ್ನು ಗೀತೆಯಲ್ಲಿ ಕ್ರೋಢೀಕರಿಸಿ ಅದರ ವಿಶ್ವವ್ಯಾಪಕತ್ವವನ್ನು ಸಾರಿದ್ದಾನೆ. ಅವನ ಪಾಂಚಜನ್ಯ ನಮ್ಮನ್ನೆಚ್ಚರಿಸಲಿ.

" ಯದ್ಯದ್ವಿಭೂತಿಮತ್ಸತ್ವಂ ಶ್ರೀಮದೂರ್ಜಿತಮೇವವಾ |
" ತತ್ತದೇವಾವಗಚ್ಛ ತ್ವಂ ಮಮತೇಜೋಽಂಶಸಂಭವಮ್ ||

[ ಯಾವ ಯಾವದು ಹೆಚ್ಚುಗಾರಿಕೆಯಿಂದ ಕೂಡಿದೆಯೋ ಕಾಂತಿ ಯಿಂದ ಕೂಡಿದೆಯೋ ಹೆಚ್ಚು ಬಲದಿಂದ ಕೂಡಿದೆಯೋ ಅದನ್ನು ನನ್ನ ಮಹಿಮೆಯ ಅಂಶದಿಂದ ಹುಟ್ಟಿದೆಂದು ನೀನು ತಿಳಿ.]—ಗೀತಾ. ೧೦: ೪೧.

# ಅ. ನ. ಕೃಷ್ಣರಾಯರ ಗ್ರಂಥಗಳು

## ಕಾದಂಬರಿ

ಸಂಧ್ಯಾರಾಗ
ಉದಯರಾಗ
ಜೀವನಯಾತ್ರೆ
ಸಾಹಿತ್ಯರತ್ನ
ಹೊಸಿಲು ದಾಟಿದ ಹೆಣ್ಣು
ಮಂಗಳಸೂತ್ರ
ನಟಸಾರ್ವಭೌಮ
ತಾಯಿಯ ಕರುಳು
ಕಣ್ಣೀರು

## ಸಣ್ಣ ಕಥೆ

ಮಿಂಚು
ಕಿಡಿ
ಕಾಮನಸೋಲು
ಪಾಪ-ಪುಣ್ಯ
ಅಗ್ನಿ ಕನ್ಯೆ
ಕಣ್ಣು ಮುಚ್ಚಾಲೆ
ಜಾತಿಹೀನನ ಮನೆಯ ಜ್ಯೋತಿ
ಶಿಲ್ಪಿ

## ನಾಟಕ

ಮದುವೆಯೊ ಮನೆಹಾಳೋ
ಆಹುತಿ
ಆದದ್ದೇನು
ಬಣ್ಣದ ಬೀಸಣಗೆ
ಜಗಜ್ಯೋತಿ ಬಸವೇಶ್ವರ
ಗೋಮುಖವ್ಯಾಘ್ರ
ರಜಪೂತಲಕ್ಷ್ಮೀ
ಸೀತಾ
ಹಿರಣ್ಯಕಶಿಪು

## ಹರಟೆ

ಪೊರಕೆ

## ಉಪನ್ಯಾಸ

ಸಜೀವ ಸಾಹಿತ್ಯ
ಸಂಸ್ಕೃತಿಯೆಂದರೇನು

## ಅನುವಾದ

ಹಿಂದೂಸ್ಥಾನದ ಕಥೆ

## ಕಾವ್ಯವಿಮರ್ಶೆ

ಕೈಲಾಸಂ

## ಪ್ರಬಂಧ

ವೀರಶೈವ ಸಾಹಿತ್ಯ ಮತ್ತು ಸಂಸ್ಕೃತಿ
ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ
ಹೊಸಹುಟ್ಟು
ಕನ್ನಡದ ದಾರಿ
ಅಖಂಡ ಕರ್ನಾಟಕ
ಕನ್ನಡದ ಹಿತಚಿಂತನೆ
ಸಾಹಿತ್ಯ ಮತ್ತು ಜೀವನ

## ಲಲಿತಕಲೆ

ರಾಜಾರವಿವರ್ಮ
ಕರ್ನಾಟಕದ ಕಲಾವಿದರು-ಭಾ
ಕರ್ನಾಟಕದ ಕಲಾವಿದರು-ಭಾ

## ಸಂಕಲನ

ಮ್ಯಾಕ್ಸಿಂ ಗಾರ್ಕಿ
ಕಾಮನ ಬಿಲ್ಲು-ಭಾಗ ೧
ಕಾಮನ ಬಿಲ್ಲು-ಭಾಗ ೨
ಪ್ರಗತಿಶೀಲ ಸಾಹಿತ್ಯ
ರಸಋಷಿ
ಪ್ರಣಯ ಗೀತೆಗಳು

## ಜೀವನ ಚರಿತ್ರೆ

ಸ್ವಾಮಿ ವಿವೇಕಾನಂದ
ಬಸವಣ್ಣನವರ ಅಮೃತವಾಣಿ
ಭಾರತದ ಬಾಪೂ

## ಸಂಪಾದಿತ

ಮರುಳಸಿದ್ಧಕಾವ್ಯ

## ಇತರ

ನನ್ನನ್ನು ನಾನೇ ಕಂಡೆ



## ಅ. ನ. ಕೃಷ್ಣರಾಯರ ಗ್ರಂಥಗಳು

### ನಮ್ಮ ಪ್ರಕಟಣೆಗಳು

| | | |
|---|---|---|
| ಗೋಮುಖವ್ಯಾಘ್ರ | — | ನಾಟಕ |
| ಜೀವನ ಯಾತ್ರೆ | — | ಕಾದಂಬರಿ |
| ಸಾಹಿತ್ಯರತ್ನ | — | ಕಾದಂಬರಿ |
| ಮಿಂಚು | — | ಕತಾಸಂಗ್ರಹ |
| ಕಿಡಿ | — | ಕತಾಸಂಗ್ರಹ |
| ಶಿಲ್ಪಿ | — | ಕತಾಸಂಗ್ರಹ |
| ಹೊಸಲುದಾಟಿದ ಹೆಣ್ಣು | — | ಕಾದಂಬರಿ |

### ಅಚ್ಚಿನಲ್ಲಿ

| | | |
|---|---|---|
| ತಾಯಿಯ ಕರುಳು | — | ಕಾದಂಬರಿ |
| ಕರ್ನಾಟಕದ ಕಲಾವಿದರು-ಭಾಗ ೨ | — | ಕಲಾವಿಮರ್ಶೆ |
| ರಜಪೂತ ಲಕ್ಷ್ಮಿ | — | ನಾಟಕ |
| ಸ್ವರ್ಣಮೂರ್ತಿ | — | ನಾಟಕ |
| ಹಿರಣ್ಯಕಶಿಪು | — | ನಾಟಕ |
| ಉಮರ್ ಖಯ್ಯಂ | — | ಕಾವ್ಯವಿಮರ್ಶೆ |
| ಮದುವೆಯೋ-ಮನೆಹಾಳೋ | — | ನಾಟಕ |



ಆನಂದ್ ಬ್ರದರ್ಸ್,
ಬೆಂಗಳೂರು-೨.